

ತನು ನಿನ್ನದು ಜೀವನ ನಿನ್ನದೊ
ಅನುದಿನದಲಿ ಬಾಹೊ ಸುಖದುಃಖ ನಿನ್ನದಯ್ಯ

ಸವಿನುಡಿ ವೇದ ಪುರಾಣ ಶಾಸ್ತ್ರಗಳ
ಕಿವಿಗೊಟ್ಟು ಕೇಳುವ ಕಥೆ ನಿನ್ನದು
ನವಮೋಹನಾಂಗಿಯರ ರೂಪವ ಕಣ್ಣಲಿ
ಎವೆಯಿಕ್ಕದೆ ನೋಡುವ ನೋಟ ನಿನ್ನದಯ್ಯ ೧

ಒಡಗೂಡಿ ಗಂಧ ಕಸ್ತೂರಿ ಪರಿಮಳಂಗಳ
ಬಿಡದೆ ಲೇಪಿಸಿಕೊಂಬುವುದು ನಿನ್ನದು
ಷಡುರಸದನ್ನಕ್ಕೆ ನಲಿದಾಡುವ ಜಿಹ್ವೆ
ಕಡುರುಚಿಕೊಂಡರೆ ಆ ರುಚಿ ನಿನ್ನದಯ್ಯ ೨

ಮಾಯಾ ಪಾಶದ ಬಲೆಯೊಳಗೆ ಸಿಲುಕಿದಂಥ
ಕಾಯ ಪಂಚೇಂದ್ರಿಯಗಳು ನಿನ್ನವು
ಕಾಯಜ ಪಿತ ಕಾಗಿ ನೆಲೆಯಾದಿಕೇಶವ
ರಾಯ ನೀನಲ್ಲದೆ ನರರು ಸ್ವತಂತ್ರರೆ

-ಶ್ರೀ ಕನಕದಾಸರು



ಸಂದರ್ಶಿಸಿ. ಆನಂದಿಸಿ.

# ಶ್ರೀ ಪದ್ಮಾವತೀ ಅಮ್ಮನವರ ದೇವಾಲಯ
# ತಿರುಚಾನೂರು



## ವಾರ್ಷಿಕ ಬ್ರಹ್ಮೋತ್ಸವಗಳು

7-12-96 ರಿಂದ 15-12-96 ವರೆಗೆ

ಬ್ರಹ್ಮೋತ್ಸವದ ಪ್ರಮುಖ ದಿನಗಳು

| | | |
|---|---|---|
| 7-12-96 | ಶನಿವಾರ | ಧ್ವಜಾರೋಹಣ. |
| 11--12-96 | ಬುಧವಾರ | ಗಜವಾಹನ |
| 12-12-96 | ಗುರುವಾರ | ಗರುಡವಾಹನ |
| 14-12-96 | ಶನಿವಾರ | ರಥೋತ್ಸವ |
| 15-12-96 | ಭಾನುವಾರ | ಚಕ್ರಸ್ನಾನ |

ಸೂಚನೆ: ಬ್ರಹ್ಮೋತ್ಸವದ ದಿನಗಳಲ್ಲಿ ದಿನವೂ ಬೆಳಗ್ಗೆ ಸಂಜೆಗಳಲ್ಲಿ ವಾಹನ ಸೇವೆಗಳಿರುತ್ತವೆ. ಸಂಗೀತ, ಹರಿಕಥೆ ಮುಂತಾದ ಸಾಂಸ್ಕೃತಿಕ ಕಾರ್ಯಕ್ರಮಗಳುಂಟು. ತಿರುಚಾನೂರಿಗೆ ತಿರುಪತಿಯಿಂದ ಹತ್ತು ನಿಮಿಷದ ಹಾದಿ, ಒಂದರ ಹಿಂದೆ ಒಂದರಂತೆ ಬಸ್ ಸೌಕರ್ಯವುಂಟು.

ನೀವೂ ಬನ್ನಿ ತಿ. ತಿ. ದೇ. ನಿಮ್ಮವರನ್ನೂ ಕರೆತನ್ನಿ




ಸಂಪುಟ -- 27 ನವಂಬರ್ 1996 ಸಂಚಿಕೆ --6


# ವಿಷಯಸೂಚಿ



ಮುಖ ಚಿತ್ರ: ತಿರುಮಲೆಯಲ್ಲಿ ಸ್ವಾಮಿಯ ಪುಷ್ಪಯಾಗ.

ಹಿಂಬದಿಯಲ್ಲಿ: ಶ್ರೀ ಜಗನ್ಮೋಹಿನಿ ಆಲಯ; ರ್‍ಯಾಲಿ.

ಒಳಗಡೆ: 1) ದೀಪಾವಳಿ ಚಿತ್ರ - ಮಶ್ರೀ.

2) ಶ್ರೀ ಮಣವಾಳ ಮಹಾಮುನಿ - ಚಿತ್ರ - ಡಾ|| ಕೆ. ಜಗದೀಶ್.



ಲೇಖನ/ಜಾಹೀರಾತುಗಳಿಗೆ

ಮಿಕ್ಕವಿವರಗಳಿಗೆ

ಸಂಪಾದಕರು,

ತಿರುಮಲೆ ತಿರುಪತಿ ದೇವಸ್ಥಾನಗಳು,

ತಿರುಪತಿ.

ಸಪ್ತಗಿರಿಯ ಎಲ್ಲ ಭಾಷೆಯ ಪ್ರತಿಗಳೂ

ಎಲ್ಲ ತಿ.ತಿ.ದೇ. ವಿಚಾರಣಾಕೇಂದ್ರಗಳಲ್ಲಿ

ದೊರೆಯುವುವು

**ಬಿಡಿ ಪ್ರತಿ ೪--೦೦**

**ವಾರ್ಷಿಕ ಚಂದಾ ೪೮--೦೦**

ಸಪ್ತಗಿರಿಯಲ್ಲಿ ಪ್ರಕಟವಾಗುವ ಲೇಖನಗಳಲ್ಲಿನ ಅಭಿಪ್ರಾಯಗಳು ಸಂಪಾದಕ ವರ್ಗದ, ಪತ್ರಿಕೆಯ, ಅಭಿಪ್ರಾಯಗಳೇ ಆಗಿರಬೇಕು ಎಂದಿಲ್ಲ. --ಸಂ||

# ತಪಸ್ವಿ ಯಾಜ್ಞವಲ್ಕ್ಯ

**ಯೋಗಾಚಾರ್ಯ ಕೆ. ಕೇಶವಮೂರ್ತಿ.**

"ಯಾಜ್ಞವಲ್ಕ್ಯಂ ಋಷಿಶ್ರೇಷ್ಠಂ
ದೈವರಾತಿಂ ಮಹಾಶಯಾಃ"

ಎಂಬ ಮಹಾಭಾರತೋಕ್ತಿಯು ಯಾಜ್ಞವಲ್ಕ್ಯರು ಋಷಿಶ್ರೇಷ್ಠರು ಎಂಬುದಕ್ಕೆ ನಿದರ್ಶನ.

"ಯೋಗೀಶ್ವರಂ ಯಾಜ್ಞವಲ್ಕ್ಯಂ
ಸಂಪೂಜ್ಯ ಮುನಯೋಽಬ್ರುವನ್"

ಎಂಬ ಸ್ಮೃತಿವಾಕ್ಯವು ಯಾಜ್ಞವಲ್ಕ್ಯರು ಯೋಗವರೇಣ್ಯರು ಎಂಬುದನ್ನು ಸಮರ್ಥಿಸುತ್ತವೆ. ದ್ವಿಜರು ತಮ್ಮ "ಬ್ರಹ್ಮಕರ್ಮ"ದ ವೇಳೆಯಲ್ಲಿ ಪ್ರತಿನಿತ್ಯ ಇವರನ್ನು ಸ್ಮರಿಸುತ್ತಾರಾದ್ದರಿಂದ ಭಾರತೀಯ ಭವ್ಯಸಾಂಸ್ಕೃತಿಕ ಪರಂಪರೆಯಲ್ಲಿ ಯಾಜ್ಞವಲ್ಕ್ಯರು ಪ್ರಾತಃಸ್ಮರಣೀಯರಲ್ಲೊಬ್ಬರು. ಭಿಕ್ಷುಕೋಪನಿಷತ್ತಿನಲ್ಲಿ ಯಾಜ್ಞವಲ್ಕ್ಯರನ್ನು 'ಕುಟೀಚಕ' ಪ್ರಭೇದದಲ್ಲಿ ಸೇರಿಸಲಾಗಿದೆ. ಸನಕ ಸನಂದಾನಾದಿಗಳಿಂದ ಆರಂಭವಾದ ಋಷಿಪರಂಪರೆಯಲ್ಲಿ ಯಾಜ್ಞವಲ್ಕ್ಯರೂ ಒಬ್ಬರು.

ಪಾಂಚಾಲದೇಶದ ಬ್ರಾಹ್ಮಣಶ್ರೇಷ್ಠರಾದ ದೇವರಾತ ಹಾಗೂ ಸುನಂದಾದೇವಿಯವರ ಸುಪುತ್ರರೇ ಮಹಾತಪಸ್ವಿ ಯಾಜ್ಞವಲ್ಕ್ಯರು. ಎಂಟನೇ ವಯಸ್ಸಿನಲ್ಲಿ ವಿಧ್ಯುಕ್ತವಾಗಿ ಉಪನೀತರಾಗಿ ಬಾಷ್ಕಲ ಮಹರ್ಷಿಗಳಿಂದ ಋಗ್ವೇದವನ್ನೂ, ಜೈಮಿನಿಗಳಿಂದ ಸಾಮವೇದವನ್ನೂ ಅಭ್ಯಸಿಸಿ, ತಮ್ಮ ಸೋದರ ಮಾವಂದಿರಾದ ವೈಶಂಪಾಯನ ಮಹರ್ಷಿಗಳಲ್ಲಿ ಯಜುರ್ವೇದವನ್ನು ಅಧ್ಯಯನ ಮಾಡಲು ಅವರ ಗುರುಕುಲವನ್ನು ಸೇರಿದರು. ವೈಶಂಪಾಯನರಲ್ಲಿದ್ದ ೩೬೦ ಮಂದಿ ಶಿಷ್ಯರಲ್ಲಿ ಅಗ್ರಗಣ್ಯರಾದರು; ಗುರುಗಳ ಮೆಚ್ಚುಗೆಗೆ ಪಾತ್ರರಾದರು.

ಆದರೆ ವಿಧಿವಿಲಾಸ; ಗುರು-ಶಿಷ್ಯರಿಗೆ ಮನಸ್ತಾಪ ಬರುವಂತಹ ಸಂಚೊಂದನ್ನೊಡ್ಡಿತು. ಇಂದು ನಾವು ಧಾರ್ಮಿಕ ಸಮ್ಮೇಳನಗಳನ್ನು ವ್ಯವಸ್ಥೆಗೊಳಿಸುವಂತೆಯೇ ಹಿಂದೆಯೂ ಋಷಿಗಳು ಒಂದೆಡೆ ಕಲೆತು ಇಂತಹ ಸಮ್ಮೇಳನಗಳನ್ನು ಏರ್ಪಡಿಸುತ್ತಿದ್ದರು. ಒಮ್ಮೆ ಮೇರುಪರ್ವತದಲ್ಲಿ ಋಷಿಗಳೆಲ್ಲರೂ ಕಲೆತು ಧಾರ್ಮಿಕ ಸಮ್ಮೇಳನವೊಂದನ್ನು ವ್ಯವಸ್ಥೆ ಮಾಡಿದರು. ಆ ಸಮ್ಮೇಳನದಲ್ಲಿ ಪ್ರತಿಯೊಬ್ಬ ಋಷಿಯೂ ಭಾಗವಹಿಸಬೇಕೆಂದೂ, ಒಂದು ವೇಳೆ ಗೈರುಹಾಜರಾದಲ್ಲಿ ಅಂತಹವರಿಗೆ 'ಬ್ರಹ್ಮಹತ್ಯಾದೋಷ' ಪ್ರಾಪ್ತಿಯಾಗುವುದೆಂದೂ ಸಭೆಯಲ್ಲಿ ಘೋಷಿಸಲಾಯಿತು. ಎಲ್ಲರೂ ಅದಕ್ಕೆ ಒಪ್ಪಿದರು. ಬ್ರಹ್ಮಹತ್ಯಾದೋಷ ಪಂಚಮಹಾಪಾತಕಗಳಲ್ಲಿ ಒಂದು. ಅದಕ್ಕೆ ಭಯಪಡುತ್ತಿದ್ದ ಕಾಲದ ಮಾತಿದು. ಈಗಿನ ವಿಚಾರ ಬೇಡ.

ಆದರೆ ಸಮ್ಮೇಳನದ ದಿನ ಅನಿವಾರ್ಯ ಕಾರಣದಿಂದಾಗಿ, (ಸಮ್ಮೇಳನಕ್ಕಿಂತಲೂ ಹೆಚ್ಚಿನ ಕರ್ತವ್ಯವೊಂದರಲ್ಲಿ ತೊಡಗಿದ್ದುದರಿಂದ) ವೈಶಂಪಾಯನರು ಆ ಸಮ್ಮೇಳನದಲ್ಲಿ ಭಾಗವಹಿಸಲು ಸಾಧ್ಯವಾಗಲಿಲ್ಲ. ಋಷಿವಾಕ್ಯದಂತೆ ಅವರಿಗೆ ಬ್ರಹ್ಮಹತ್ಯಾದೋಷವು ಪ್ರಾಪ್ತಿಯಾಯಿತು. ತದ್ದೋಷ ಪರಿಹಾರಾರ್ಥವಾಗಿ ತಮ್ಮ ಶಿಷ್ಯರೆಲ್ಲರೂ ಅನುಷ್ಠಾನ ಮಾಡಬೇಕೆಂದು ವೈಶಂಪಾಯನರು ಆಜ್ಞಾಪಿಸಿದರು. ಸಹಪಾಠಿಗಳ ಸ್ವಭಾವವನ್ನು ಚೆನ್ನಾಗಿ ಬಲ್ಲವರಾಗಿದ್ದ ಯಾಜ್ಞವಲ್ಕ್ಯರು ಹೀಗೆ ಹೇಳಿದರು.

"ಯಾಜ್ಞವಲ್ಕ್ಯಶ್ಚ ತಚ್ಛಿಷ್ಯ
ಆಹಾಹೋ ಭಗವನ್ ಕಿಯತ್
ಚರಿತೇನಾಲ್ಪ ಸಾರಾಣಾಂ
ಚರಿಷ್ಯೇಽಹಂ ಸುದುಶ್ಚರಮ್"

"ಅನುಷ್ಠಾನದ ಬಗ್ಗೆ ಈ ಶಿಷ್ಯರಿಗೆ ಹೆಚ್ಚು ಸಾಮರ್ಥ್ಯವಿಲ್ಲದ ಕಾರಣ ನಾನೊಬ್ಬನೇ ಅನುಷ್ಠಾನ ಮಾಡಿ ತಮ್ಮ ದೋಷವನ್ನು ನಿವಾರಿಸುತ್ತೇನೆ" - ಎಂದರು. ಮೊದಲಿನಿಂದ ಕಡೆಯವರೆಗೂ ಯಾಜ್ಞವಲ್ಕ್ಯರಲ್ಲಿ ಈ ಕೆಚ್ಚನ್ನು ನಾವು ಕಾಣುತ್ತೇವೆ. ಆದರೆ ಈ ಬ್ರಾಹ್ಮಣನಿಂದೆ ವೈಶಂಪಾಯನರಿಗೆ ಹಿಡಿಸಲಿಲ್ಲ. "ವಿಪ್ರೋತ್ತಮರ ತೇಜೋವಧೆ ಮಾಡಿದ ನೀನು ನನ್ನ ಶಿಷ್ಯನಲ್ಲ. ಆದುದರಿಂದ ನನ್ನಿಂದ ಕಲಿತ ವಿದ್ಯೆಯನ್ನೆಲ್ಲಾ ಹಿಂದಿರುಗಿಸು" ಎಂದು ಗುರುಗಳು ಆಗ್ರಹಪಡಿಸಿದರು. ಯಾಜ್ಞವಲ್ಕ್ಯರು ತಮ್ಮ ಸೋದರಳಿಯ ಎಂಬುದನ್ನೂ ಮರೆತು ತಪ್ಪಿಗೆ ತಕ್ಕ ಶಿಕ್ಷೆಯನ್ನು ನೀಡಿದ ವೈಶಂಪಾಯನರ ಧರ್ಮನಿಷ್ಠೆಯನ್ನು ಎಷ್ಟು ಹೊಗಳಿದರೂ ಅಲ್ಪವೇ. ಶಿಷ್ಯನಿಗೆ ತಕ್ಕ ಗುರು. ಗುರುಗಳ ಕೋಪವನ್ನು ಶಮನಗೊಳಿಸಲು ಯಾಜ್ಞವಲ್ಕ್ಯರು ಮಾಡಿದ ಪ್ರಯತ್ನಗಳೆಲ್ಲಾ ವ್ಯರ್ಥವಾದುವು.

ಆಗ ನಿರ್ವಾಹವಿಲ್ಲದೆ ಗುರ್ವಾಜ್ಞೆಯನ್ನು ಪಾಲಿಸುವ ನಿಮಿತ್ತ ಯಾಜ್ಞವಲ್ಕ್ಯರು ತಾವು ವೈಶಂಪಾಯನರಿಂದ ಕಲಿತ ಸಮಸ್ತ ವಿದ್ಯೆಯನ್ನೂ ವಮನ ಮಾಡಿದರು. ತೇಜೋಮಯವಾದ ಆ ವಿದ್ಯೆಯು ವ್ಯರ್ಥವಾಗಬಾರದೆಂದು ವೈಶಂಪಾಯನರ ಇತರ ಶಿಷ್ಯರು 'ತಿತ್ತಿರಿ ಪಕ್ಷಿ'ಗಳ ವೇಷ ಧರಿಸಿ ಅದನ್ನು ಭಕ್ಷಿಸಿದರು. ಈ ವಿಚಾರ ಪುರಾಣಗಳಲ್ಲಿ ಬೇರೊಂದು ರೀತಿ ವರ್ಣಿತವಾಗಿದೆ. ಇರಲಿ, ಒಟ್ಟಿನಲ್ಲಿ ಕಲಿತ ವಿದ್ಯೆಯನ್ನು ಗುರುಗಳ ಅಪೇಕ್ಷೆಯಂತೆ ಹಿಂದಿರುಗಿಸಿದ ಯಾಜ್ಞವಲ್ಕ್ಯರ ಸಾಮರ್ಥ್ಯ ಶ್ಲಾಘನೀಯವಾದದ್ದು.

ಕಲಿತ ವಿದ್ಯೆಯೆಲ್ಲವನ್ನೂ ಗುರುಗಳಿಗೆ ಹಿಂದಿರುಗಿಸಿದ ಬಳಿಕ ಮತ್ತೆ ವಿದ್ಯಾಭ್ಯಾಸ ಮಾಡದೇ ಕಷ್ಟೆ, ಮಾನವ ಗುರುಗಳು ತಾವು ಹೇಳಿಕೊಟ್ಟ ವಿದ್ಯೆಯನ್ನು ಹಿಂದಕ್ಕೆ ಕೊಡುವಂತೆ ಕೇಳುತ್ತಾರೆ. ಆದಕಾರಣ ತಾವು ದೇವಗುರುವೊಬ್ಬನನ್ನು ಪಡೆಯದೇಕೆಂಬ ಛಲದಿಂದ ಯಾಜ್ಞವಲ್ಕ್ಯರು ಸರಸ್ವತೀ ನದಿಯ ತೀರದಲ್ಲಿ ಜಗಚ್ಚಕ್ಷುವಾದ ಸೂರ್ಯಭಗವಂತನನ್ನು ಕುರಿತು ಉಗ್ರತಪಸ್ಸನ್ನಾಚರಿಸಿದರು. ಇವರ ತಪಸ್ಸಿಗೆ ಮೆಚ್ಚಿ ಭಾಸ್ಕರನು ಪ್ರತ್ಯಕ್ಷನಾಗಿ ಇವರ ಕೋರಿಕೆಯಂತೆ ಯಜುರ್ವೇದವನ್ನು ಅಶ್ವರೂಪಿಯಾಗಿ ಅನುಗ್ರಹಿಸಿದ. ಆ ವೇದವೇ ಮುಂದೆ ಶುಕ್ಲ ಯಜುರ್ವೇದವೆಂದು ಪ್ರಖ್ಯಾತವಾಯಿತು. (ಕೃಷ್ಣ ಯಜುರ್ವೇದ ಬೇರೊಂದು ಪ್ರಕಾರ) 'ಬೃಹದಾರಣ್ಯಕ' ಮತ್ತು 'ಈಶಾವಾಸ್ಯ' ಈ ಎರಡು ಖ್ಯಾತ ಉಪನಿಷತ್ತುಗಳು ಶುಕ್ಲಯಜುರ್ವೇದಕ್ಕೆ ಸೇರಿವೆ.

"ಉತ್ತಮಂ ಬೃಹದಾರಣ್ಯಕಂ ಸರ್ವೋಪನಿಷದಾಂ ಶಿರಃ" ಅಂದರೆ ಎಲ್ಲ ಉಪನಿಷತ್ತುಗಳಿಗೂ ಶಿರಃಪ್ರಾಯ; ಮಹತ್ತು ಮತ್ತು ಬೃಹತ್ತುಗಳಿಂದ ಕೂಡಿದ ಉಪನಿಷತ್ತೇ 'ಬೃಹದಾರಣ್ಯಕ'. ಇಷ್ಟೇ ಅಲ್ಲದೆ ಜಾಬಾಲ ಹಂಸ ಪರಮಹಂಸಾದಿ ಹಲವು ಉಪನಿಷತ್ತುಗಳು ಶುಕ್ಲಯಜುರ್ವೇದದಲ್ಲಿವೆ.

ಸೂರ್ಯನಿಂದ ಈ ವೇದವನ್ನು ಯಾಜ್ಞವಲ್ಕ್ಯರು ಪಡೆದ ಬಗ್ಗೆಯೂ ಪುರಾಣಗಳಲ್ಲಿ ಹಲವು ವಿಧದ ಕಥೆಗಳಿವೆ. ಸೂರ್ಯನೇ ಯಾಜ್ಞವಲ್ಕ್ಯರಿಗೆ ನೇರ ವಾಗಿ ಯಜುರ್ವೇದವನ್ನು ಉಪದೇಶಿಸಿದನೆಂದೂ, ಸೂರ್ಯನ ಕುದುರೆಗಳ ಖುರಪುಟಧ್ವನಿಯಿಂದಾಗಿ, ಸೂರ್ಯನು ಹೇಳಿಕೊಟ್ಟ ವೇದಸ್ವರಕ್ಕೂ ಯಾಜ್ಞವಲ್ಕ್ಯರು ಗ್ರಹಿಸಿದ ಸ್ವರಕ್ಕೂ ವ್ಯತ್ಯಾಸವಾಗಿ ಅದು ಶುಕ್ಲಯಜುರ್ವೇದವೆಂಬ ಬೇರೆ ಒಂದು ವೇದವೇ ಆಯಿತೆಂದೂ ಹೇಳುತ್ತಾರೆ.

ಗಾಯತ್ರೀ ಉಪಾಸಕರಾದ ಯಾಜ್ಞವಲ್ಕ್ಯರು ಆ ದೇವಿಯ ಉಪಾಸನೆಯ ಫಲವಾಗಿ ಕುದುರೆಯೊಂದನ್ನು ಪಡೆದು ಆ ಕುದುರೆಯನ್ನೇರಿ ಸೂರ್ಯನೊಂದಿಗೆ ಎದುರು - ಬದುರು ಸಂಚರಿಸುತ್ತಾ ಈ ವೇದವನ್ನು ಕಲಿತರೆಂಬುದು ಇನ್ನೊಂದು ಕಥೆ. ಯಾಜ್ಞವಲ್ಕ್ಯರೇ ಸೂರ್ಯನ ಸಪ್ತಾಶ್ವಗಳಲ್ಲಿ ಒಂದಾಗಿ ಆತನ ರಥವನ್ನು ಹೊತ್ತು ಈ ಶುಕ್ಲ ಯಜುರ್ವೇದವನ್ನು ಪಡೆದರೆಂಬುದು ಮತ್ತೊಂದು ಆಖ್ಯಾಯಿಕೆ. ಏನೇ ಇರಲಿ. ಸೂರ್ಯನಿಂದ ಕಲಿತರೆಂಬುದು ಮುಖ್ಯ ಸಂಗತಿ.

ಸರಸ್ವತೀ ನದಿಯ ತೀರದಲ್ಲಿಯೇ ಯಾಜ್ಞವಲ್ಕ್ಯರು ಆಶ್ರಮವೊಂದನ್ನು ಸ್ಥಾಪಿಸಿ ಅಲ್ಲಿ ಕಾಣ್ವ, ಮಾಧ್ಯಂದಿನ, ಸಾಪೇಯ, ಸಾಮಶ್ರವ ಮುಂತಾದ ಶಿಷ್ಯರಿಗೆ ಈ ಶುಕ್ಲಯಜುರ್ವೇದವನ್ನು ಬೋಧಿಸುತ್ತ ಯೋಗಾನುಷ್ಠಾನದಿಂದ ಕಾಲಕಳೆಯುತ್ತಿದ್ದರು. ಇಂದಿಗೂ ಆ ಪರಂಪರೆಯ ಶಿಷ್ಯರಿದ್ದಾರೆ. ಅವರನ್ನು 'ಪ್ರಥಮಶಾಖೆಯವರು' ಎಂದು ಕರೆಯುತ್ತಾರೆ.

ಅನಂತರ ಇವರ ಕೀರ್ತಿಯನ್ನು ಕೇಳಿ ಕತ ಮಹರ್ಷಿಗಳು ತಮ್ಮ ಪುತ್ರಿಯಾದ 'ಕಾತ್ಯಾಯನಿದೇವಿ' ಯನ್ನು ಇವರಿಗೆ ಪಾಣಿಗ್ರಹಣ ಮಾಡಿಸಿ ಗೃಹಸ್ಥಾಶ್ರಮ ಜೀವನಕ್ಕೆ ಕಾಲಿಡುವಂತೆ ಮಾಡಿದರು. ಯಾಜ್ಞವಲ್ಕ್ಯರ ಗೃಹಸ್ಥಜೀವನ ಪರಮ ಪವಿತ್ರವಾಗಿ ಸಾಗಿತು. ಯಾಜ್ಞವಲ್ಕ್ಯರಿಗೆ ಕಾತ್ಯಾಯನಿಯಲ್ಲದೆ 'ಮೈತ್ರೇಯಿ' ಎಂಬ ಇನ್ನೊಬ್ಬ ಪತ್ನಿಯಿದ್ದರೆಂಬುದು "ಯಾಜ್ಞವಲ್ಕ್ಯಸ್ಯ ದ್ವೇಭಾರ್ಯೇ" ಎಂಬ ಉಕ್ತಿಯಿಂದ ವ್ಯಕ್ತವಾಗುತ್ತದೆ.

ಕಾತ್ಯಾಯನಿ ಉತ್ತಮ ಗೃಹಿಣಿಯಾದರೆ ಮೈತ್ರೇಯಿ ಬ್ರಹ್ಮವಾದಿನಿಯಾಗಿದ್ದರು. ಅವರು ವಿರಾಗಿಣಿಯಾಗಿದ್ದು ಜ್ಞಾನಮಾರ್ಗದಲ್ಲಿ ಮುನ್ನಡೆದರು. ಕಾತ್ಯಾಯನಿ ದೇವಿಗೆ ಚಂದ್ರಕಾಂತ, ಮಹಾಮೇಘ ಮತ್ತು ವಿಜಯ ಎಂಬ ಮೂವರು ಮಕ್ಕಳಾದರೆಂದು ಕೆಲವು ಗ್ರಂಥಗಳಿಂದ ತಿಳಿದುಬರುತ್ತದೆ.

ಯಾಜ್ಞವಲ್ಕ್ಯರ ಜ್ಞಾನದ ಪರಾಕಾಷ್ಠೆಯನ್ನು ಜಗತ್ತಿಗೆ ಸಾರುವ ಒಂದು ಸಂದರ್ಭ ದೈವಯೋಗದಿಂದ ಬಂದೊದಗಿತು. ರಾಜರ್ಷಿ ಜನಕನು 'ಬಹುದಕ್ಷಿಣಾ' ಎಂಬ ಯಾಗವೊಂದನ್ನು ಮಾಡಿ ಅದಕ್ಕೆ ಬ್ರಹ್ಮವೇತ್ತರಾದ ಹಲವು ವಿದ್ವಾಂಸರನ್ನು ಆಹ್ವಾನಿಸಿದನು. ಅಷ್ಟು ಜನರಲ್ಲಿ ನಿಜವಾದ ಬ್ರಹ್ಮಜ್ಞಾನಿ ಯಾರೆಂದು ತಿಳಿಯುವ ಕುತೂಹಲ ಜನಕನಿಗುಂಟಾಯಿತು. ಆಗ ಜನಕಮಹಾರಾಜನು ಹೇಮ ಖುರಶೃಂಗಾಭರಣ'ಗಳಿಂದ ಭೂಷಿತವಾದ ಒಂದು ಸಾವಿರ ಕರೆಯುವ ಹಸುಗಳನ್ನು ಪಣವಾಗಿಟ್ಟು "ಈ ವಿದ್ವತ್ಸಭೆಯಲ್ಲಿ ಬ್ರಹ್ಮಜ್ಞಾನಿಗಳು ಯಾರುಂಟೋ ಅವರು ಇದಕ್ಕೆ ನಾಥರು" ಎಂದು ತುಂಬಿದ ಆ ಸಭೆಯಲ್ಲಿ ಘೋಷಿಸಿದ. ಸಭೆ ಸ್ತಂಭೀಭೂತವಾಯಿತು. ಎಲ್ಲೆಲ್ಲೂ ಮೌನವಾವರಿಸಿತು.

ಆಗ ಆ ಮೌನವನ್ನು ಮುರಿದು ಯಾಜ್ಞವಲ್ಕ್ಯರು ತಮ್ಮ ಶಿಷ್ಯರಿಗೆ ಹೇಳಿದರು, "ಈ ಗೋವುಗಳನ್ನು ನಮ್ಮ ಆಶ್ರಮಕ್ಕೆ ಹೊಡೆದುಕೊಂಡು ಹೋಗಿ" ಆಶ್ವಾ, ಜಾರತ್ಕಾರವ, ಆರ್ತಭಾಗ - ಮೊದಲಾದ ಋಷಿವರೇಣ್ಯರು ಇದಕ್ಕೆ ಆಕ್ಷೇಪವೆತ್ತಿ ಯಾಜ್ಞವಲ್ಕ್ಯರನ್ನು ಬ್ರಹ್ಮಜಿಜ್ಞಾಸೆಗೆ ಆಹ್ವಾನಿಸಿದರು.

ವಿಶೇಷವೆಂದರೆ ಯಾಜ್ಞವಲ್ಕ್ಯರನ್ನು ಪ್ರಶ್ನೆಮಾಡಿದವರಲ್ಲಿ ಬ್ರಹ್ಮವಾದಿನಿಯರಾದ ಗಾರ್ಗಿ, ವಾಚಕ್ನವಿ ಮುಂತಾದ ಸ್ತ್ರೀಯರೂ ಇದ್ದರು.

ಯಾಜ್ಞವಲ್ಕ್ಯರು ಎಲ್ಲರನ್ನೂ ವಾದದಲ್ಲಿ ಜಯಿಸಿದುದೇ ಅಲ್ಲದೆ ತಮ್ಮ ಪ್ರಶ್ನೆಗಳಿಗೆ ಅವರು ನಿರುತ್ತರರಾಗುವಂತೆ ಮಾಡಿದರು. ಇವರ ವಿದ್ಯಾಪ್ರೌಢಿಮೆಯನ್ನೂ, ಜ್ಞಾನದ ಪರಾಕಾಷ್ಠೆಯನ್ನೂ ಕಂಡ ಜನಕನು ತನ್ನ ಇಡೀ ರಾಜ್ಯವನ್ನೇ ಅವರಿಗೆ ಅರ್ಪಿಸಲು ಮುಂದಾದನು. ಯಾಜ್ಞವಲ್ಕ್ಯರಿಗೆ ಬೇಕಾಗಿದ್ದುದು ಬ್ರಹ್ಮವಸ್ತುವೇ ವಿನಾ ರಾಜ್ಯವಲ್ಲವಾದ್ದರಿಂದ ಅದನ್ನು ನಯವಾಗಿ ನಿರಾಕರಿಸಿದರು.

ಕಡೆಯಲ್ಲಿ ಯಾಜ್ಞವಲ್ಕ್ಯರು ಆಶ್ರಮಧರ್ಮದಂತೆ ವಾನಪ್ರಸ್ಥ ಜೀವನವನ್ನು ಆರಂಭಿಸಲು ಸಿದ್ಧರಾದರು. ತಮ್ಮ ಸಮಸ್ತ ಸಂಪತ್ತನ್ನೂ ಈರ್ವರು ಪತ್ನಿಯರಿಗೆ ಸಮಪ್ರಮಾಣದಲ್ಲಿ ಹಂಚಲು ಮೊದಲಾದರು. ಆಗ ಮೈತ್ರೇಯಿಯು ನಶ್ವರವಾದ ಐಹಿಕ ಸಂಪತ್ತಿಗೆ ಮನಸೋಲಲಿಲ್ಲ. ಆಗ "ಆತ್ಮಸಾಕ್ಷಾತ್ಕಾರ" ಹಾದಿಯನ್ನು ಆಕೆಗೆ ತೋರಿ ಅವರ ಜೀವನವನ್ನು ಧನ್ಯತೆಗೆ ಕೊಂಡೊಯ್ದರು.

ವಾನಪ್ರಸ್ಥಾಶ್ರಮದ ಅವಧಿ ಮುಗಿದನಂತರ ಕಡೆಯದಾದ ಸಂನ್ಯಾಸವನ್ನು ಸ್ವೀಕರಿಸಿ ಕಡೆಯಲ್ಲಿ ಯೋಗಶಕ್ತಿಯಿಂದ ದೇಹತ್ಯಾಗಮಾಡಿ ಪರಬ್ರಹ್ಮದಲ್ಲಿ ಲೀನರಾದರು.

"ಅಯಂತು ಪರಮೋಧರ್ಮೋ
ಯದ್ಯೋಗೇನಾತ್ಮದರ್ಶನಮ್"

ಎಂದು ಸಾರಿದ ಯಾಜ್ಞವಲ್ಕ್ಯರು ಅದನ್ನು ತಮ್ಮ ಜೀವಿತದಲ್ಲಿ ಕಂಡ ಮಹಾನುಭಾವರು. ಅವರು ಪ್ರಚುರ ಪಡಿಸಿದ ಯೋಗ "ಲಯಯೋಗ".

"ಲಯೋ ವಿಷಯ ವಿಸ್ಮೃತಿಃ
ನಿರಾಲಂಬ ಮನಃಕೃತ್ವಾ
ನ ಕಿಂಚಿದಪಿ ಚಿಂತಯೇತ್
ಭ್ರುವೋರ್ಮಧ್ಯೇ ಶಿವಸ್ಥಾನಂ
ಮನಸ್ತತ್ರ ವಿಲೀಯತೇ"

ಎಂಬುದು 'ಲಯಯೋಗ'ದ ವಿವರಣೆ. ಯೋಗಶಾಸ್ತ್ರದ ಆದ್ಯಪ್ರವರ್ತಕರಾದ ಭಗವತ್ಪತಂಜಲಿಗಳ ಬಳಿಕ ಯೋಗವಿದ್ಯೆಯನ್ನು ಪ್ರಚಾರ ಮಾಡಿದವರಲ್ಲಿ ಯೋಗೀಶ್ವರ ಯಾಜ್ಞವಲ್ಕ್ಯರು ಖ್ಯಾತನಾಮರು. ಪೂಜ್ಯರಾದ ಇವರ ಪ್ರಸ್ತಾಪವು ಭಾಗವತಾದಿ ಅನೇಕ ಪುರಾಣಗಳಲ್ಲಿ ಪ್ರಸಿದ್ಧವಾಗಿದೆ. ಗೌತಮ-ಭಾರದ್ವಾಜ- ವಸಿಷ್ಠ ಮಹರ್ಷಿಗಳ ಪಂಕ್ತಿಯಲ್ಲಿ ರಾರಾಜಿಸತಕ್ಕವರು ಮಹರ್ಷಿ ಯಾಜ್ಞವಲ್ಕ್ಯರು.

'ಯಾಜ್ಞವಲ್ಕ್ಯಸ್ಮೃತಿ' ಎಂಬ ಧರ್ಮಶಾಸ್ತ್ರವನ್ನೂ 'ಯಾಜ್ಞವಲ್ಕ್ಯಶಿಕ್ಷಾ' ಎಂಬ ಶಿಕ್ಷಾಗ್ರಂಥವನ್ನೂ ಸಂಸ್ಕೃತ ಸಾರಸ್ವತಲೋಕಕ್ಕೆ ನೀಡಿ ಮಹೋಪಕಾರಮಾಡಿದ್ದಾರೆ. ಅವರ ಸ್ಮೃತಿ ಇಂದಿಗೂ ಪ್ರಖ್ಯಾತವಾಗಿದೆ. ತ್ರಿಮೂರ್ತಿಗಳಾದ ಬ್ರಹ್ಮವಿಷ್ಣುಮಹೇಶ್ವರರು ಯಾಜ್ಞವಲ್ಕ್ಯರನ್ನು ಯೋಗೀಶ್ವರರೆಂದು ಕೊಂಡಾಡಿದ್ದಾರೆಂದು ಸ್ಕಾಂದ ಸೌರಸಂಹಿತೆಯಲ್ಲಿ ಹೇಳಿದೆ. ತತ್ತ್ವಸಾರಾವಳಿ, ತತ್ತ್ವಪ್ರಪಂಚ, ಜ್ಞಾನರತ್ನಾಕರ ಮುಂತಾದ ಹಲವಾರು ಗ್ರಂಥಗಳಲ್ಲಿ ಯೋಗೀಶ್ವರ ಯಾಜ್ಞವಲ್ಕ್ಯರ ಮಹಿಮೆ ಹೇಳಲ್ಪಟ್ಟಿದೆ.

ಇಂತಹ ಪರಮ ಯೋಗಿಗಳನ್ನು ಪಡೆದ ನಮ್ಮ ನಾಡೇಧನ್ಯ. ಅವರ ಮಾರ್ಗದಲ್ಲಿ ನಾವೂ ನಡೆದು ಧನ್ಯರಾಗೋಣ.

ತಪಸ್ವಿಭ್ಯೋಧಿಕೋ ಯೋಗೀ
ಜ್ಞಾನಿಭ್ಯೋಪಿ ಮತೋಧಿಕಃ
ಕರ್ಮಿಭ್ಯಶ್ಚಾಧಿಕೋ ಯೋಗೀ
ತಸ್ಮಾದ್ಯೋಗೀ ಭವ............" ಎಂಬ

ಭಗವಂತನ ವಾಣಿ ಯಾಜ್ಞವಲ್ಕ್ಯರ ವಿಷಯದಲ್ಲಿ ಅನ್ವರ್ಥವಾಗಿದೆ. ✤



# ಅನಪಾಯಿನಿ ಲಕ್ಷ್ಮೀ

---ಸಂತ ಹರಿಹರಾನಂದ ಸರಸ್ವತೀ.

ಶ್ರೀವಿಷ್ಣುವಿನ ಅವತಾರವೇ-ಆದ- ತಿರುಮಲೆಯ ತಿಮ್ಮಪ್ಪನಿಗೆ "ಶ್ರೀನಿವಾಸ" ಎಂಬ ಹೆಸರಿದೆ. ಅದು ಅನ್ವರ್ಥನಾಮ. ಶ್ರೀನಿವಾಸ ಎಂದರೆ - "ಸಕಲ ಸಂಪತ್ಪ್ರದಳಾದ ಲಕ್ಷ್ಮಿಗೆ ನಿವಾಸನಾದವನು" - ಎಂದು ಅರ್ಥ. ಸರ್ವಜ್ಞ ಮೂರುತಿಯಾದ ಶ್ರೀಮನ್ಮಹಾವಿಷ್ಣುವಿನ ವಕ್ಷಸ್ಥಲದಲ್ಲಿ ಲಕ್ಷ್ಮಿಯವಾಸ - ಆದ್ದ ಆ ಪರಮಾತ್ಮನ ಹೆಸರು "ಶ್ರೀನಿವಾಸ" (ಎಂದು) ಹೌದು (ಶ್ರೀ) ಸಿರಿದೇವಿಲಕ್ಷ್ಮಿಯು ಯಾವಾಗ ಶ್ರೀವಿಷ್ಣುವಿನ ವಕ್ಷಸ್ಥಲವನ್ನು ಸೇರಿದಳು? ಅದು ಒಂದು "ಸ್ವಾರಸ್ಯಕರ - ಸುಂದರ ಸನ್ನಿವೇಶ"ದಲ್ಲಿ- ಒಮ್ಮೆ ಇಂದ್ರಾದಿ ದೇವತೆಗಳು "ಅಮೃತ"ವನ್ನು ಪಡೆಯಬೇಕೆಂದು ಬಯಸಿದರು. ಅದಿರುವುದು ಸಮುದ್ರದಲ್ಲಿ, ಪಡೆಯುವ ಪರಿ ಹೇಗೆ. ಸರಿ ಸಮುದ್ರವನ್ನು ಕಡೆದು ಅಮೃತವನ್ನು ಪಡೆಯುವುದೆಂದು ತೀರ್ಮಾನಿಸಿದರು. ಆದರೆ ಆ ಕಾರ್ಯವು ದೇವತೆಗಳಾದ ತಮ್ಮಿಂದ ಸಾಧ್ಯವಾಗದು. ಅದಕ್ಕೆ ದಾನವರ ಸಹಕಾರವೂ ಬೇಕು ಎಂದಾಯಿತು. ದೇವಗುರು ಬೃಹಸ್ಪತಿಗೂ - ದಾನವ ಗುರು ಶುಕ್ರಾಚಾರ್ಯರಿಗೂ ಪರಸ್ಪರ ರಾಜಿಮಾಡಿಸಿ, ದಾನವರ ಸಹಾಯ - ಸಹಕಾರಗಳೊಂದಿಗೆ ಸಮುದ್ರ ಮಥನಮಾಡುವುದೆಂದು ನಿರ್ಣಯವಾಯಿತು. ಮಂದರ ಪರ್ವತವನ್ನು ಕಡೆಗೋಲಾಗಿಯೂ, ವಾಸುಕಿಯನ್ನು ಹಗ್ಗವಾಗಿಯೂ ಮಾಡಿಕೊಂಡು (ಕಡೆಯಲು) ದೇವತೆಗಳೂ - ದಾನವರೂ ಪರಸ್ಪರ ವೈರ ಮರೆತು- ಸಮುದ್ರವನ್ನು ಕಡೆಯಲಾರಂಭಿಸಿದರು. ಸಮುದ್ರ ಮಥನಕಾಲದಲ್ಲಿ ಮೊದಲು ಹುಟ್ಟಿದ್ದು ಹಾಲಾಹಲ. ಆಗ ದೇವ - ದಾನವರಲ್ಲಾಯ್ತು ಕೋಲಾಹಲ. ಸತೀಪತಿಯಾದ ಶಿವನು ಆ ವಿಷವನ್ನುಂಡು ವಿಷಕಂಠನೆನ್ನಿಸಿ - ಬಂದ ಆಪತ್ತನ್ನು ನಿವಾರಿಸಿದ. ಮುಂದೆ - "ಉಚ್ಚೈಃ ಶ್ರವ" ಎಂಬ ಶ್ರೇಷ್ಠವಾದ ಶ್ವೇತಾಶ್ವವೊಂದು ಬಂತು. ಹೀಗೇ "ಸೋಮ" ಮೊದಲಾದ ಅನೇಕ ಅಪೂರ್ವವಸ್ತುಗಳು ಸಮುದ್ರದಿಂದ ಹುಟ್ಟಿದುವು. ತರುವಾಯ ಸಿರಿದೇವಿಯಾದ - ಸಕಲೈಶ್ವರ್ಯದ ಅಧಿದೇವತೆಯಾದ ಲಕ್ಷ್ಮಿಯು ಸಮುದ್ರದಿಂದ ಮೇಲೆದ್ದು ಬರುತ್ತಿದ್ದಾಳೆ. ಅವಳು ಸರ್ವಾಂಗಸುಂದರಳಾಗಿ, ಅತಿ ತೇಜಸ್ವಿನಿಯಾಗಿ, ಚೆಲುವೆಯಾಗಿ ಕಾಣಿಸುತ್ತಿದ್ದಾಳೆ. ಅವಳ ಕೈಯಲ್ಲಿ ಒಂದು



ದಿವ್ಯವಾದ - ಪರಿಮಳ ಭರಿತವಾದ ಘಮ - ಘಮಿಸುವ ಹೂಮಾಲೆಯೊಂದಿದೆ. ಸಮುದ್ರಮಥನ ಮಾಡುತ್ತಿದ್ದ ದೇವ - ದಾನವರ ದೃಷ್ಟಿಯು ಸರ್ವಾಭರಣ ಭೂಷಿತಳಾದ ಲಕ್ಷ್ಮಿಯ ಕಡೆಗೆ ಹೊರಳಿದೆ. ಎಲ್ಲರೂ ಅವಳನ್ನೇ ದೃಷ್ಟಿಸಿ ನೋಡುತ್ತಿದ್ದಾರೆ. ಇಂದ್ರಾದಿ ದೇವತೆಳೂ ಮೊದಲಾಗಿ - ದಾನವರೆಲ್ಲರ ಮನಸ್ಸಿನಲ್ಲಿ ತುಂಬಿದ್ದಾಳೆ. ಪ್ರತಿಯೊಬ್ಬರೂ, ವೈಯಕ್ತಿಕವಾಗಿ ತಮ್ಮ ತಮ್ಮ ಉತ್ತರೀಯವನ್ನು ಸರಿಮಾಡಿಕೊಳ್ಳುತ್ತ ತಮ್ಮ ಮನದಲ್ಲಿ ಚೆಲುವೆ ಲಕ್ಷ್ಮಿಯು ತನ್ನ ಕೊರಳಿಗೆ ಮಾಲೆ ಹಾಕಿದರೆ, ಆ ಸುಂದರಿಯು, ನನ್ನ ಒಡತಿಯಾದರೆ - ಮೂರುಲೋಕಗಳಲ್ಲಿಯೂ ನನ್ನನ್ನು ಸರಿಗಟ್ಟುವವರು ಯಾರೂ ಇರುವುದಿಲ್ಲ. ಎಂದುಕೊಂಡು ಲಕ್ಷ್ಮಿಯು - ತಮ್ಮ ಸಮೀಪ ಬರುವುದನ್ನು ಕಾಯುತ್ತಿದ್ದಾರೆ. ಆಕೆಯ ದರ್ಶನದಿಂದ ಅವರಿಗೆ ಸಮುದ್ರಮಥನ ಕಾರ್ಯವು ಮರೆತೇ ಹೋಗಿದೆ. ಸರ್ವಸೌಭಾಗ್ಯ ಧಾತ್ರಿಯಾದ ಸಿರಿದೇವಿ ಲಕ್ಷ್ಮಿಯು ಮೊದಲು ಇಂದ್ರಾದಿ ದೇವತೆಗಳ ಸಾಲಿನಲ್ಲಿ ಹಾದು ಹೋದಳು. ಆದರೆ ಯಾರ ಕೊರಳಿಗೂ ಮಾಲೆ ಹಾಕಲಿಲ್ಲ. ದೇವತೆಗಳು ಸಪ್ಪೆಮೋರೆಯಿಂದ ತಮ್ಮ ತಲೆತಗ್ಗಿಸಿ ನಿಂತರು. ಆ ತರುವಾಯ - ದಾನವರ ಸಾಲಿನಲ್ಲಿ ಒಮ್ಮೆ ಬರುವಳು. ಅವರಲ್ಲಿಯೂ ಯಾರ ಕೊರಳಿಗೂ ಮಾಲೆಹಾಕದೆ ಮುಂದೆ ನಡೆದಾಗ - ದಾನವರೂ ನಿರಾಶೆಯಿಂದ ಅವನತಮುಖಿಗಳಾದರು. ಮುಂದೆ ನಡೆದ ಲಕ್ಷ್ಮಿಯು ಹಂಸಗಮನೆಯಾಗಿ ಹೊರಟು ಶೇಷಶಾಯಿಯಾದ ಶ್ರೀಮನ್ನಾರಾಯಣ ವಿಷ್ಣುವಿನ ಕೊರಳಿಗೆ ಮಾಲೆಯನ್ನು ಹಾಕಿಯೇ ಬಿಟ್ಟಳು. ಲಕ್ಷ್ಮಿಯು ಶ್ರೀಮನ್ನಾರಾಯಣನ ಒಡತಿಯಾದಳು. ನಿರಾಶೆಗೊಂಡ ದೇವದಾನವರು ಲಕ್ಷ್ಮಿಯ ಕಡೆಗೆ ದೃಷ್ಟಿಸಿ ನೋಡುತ್ತ ಇರುವಾಗ ನಾರಾಯಣನು, ಓಹೋ, ಇವರ ಕಣ್ಣು ಲಕ್ಷ್ಮಿಯಮೇಲೆ ಬಿದ್ದಿದೆ. ಇವಳು (ಲಕ್ಷ್ಮಿಯು) ಹೊರಗಿದ್ದರೆ ಅಪಾಯ ಎಂದರಿತು, ಚೆಲುವೆಯಾದ ಸಿರಿಲಕ್ಷ್ಮಿಯನ್ನು ತನ್ನದೆಯೊಳಗೆ ಭದ್ರವಾಗಿ ಇರಿಸಿಕೊಂಡ ಅಂದಿನಿಂದ (ತಿಮ್ಮಪ್ಪನು) ವಿಷ್ಣುವು - ಶ್ರೀನಿವಾಸನಾದ. ಲಕ್ಷ್ಮಿಯು "ಅನಪಾಯಿನಿ" ಎಂದು ಕರೆಸಿಕೊಳ್ಳುತ್ತ - ಶ್ರೀನಿವಾಸನಲ್ಲಿ ಯಾವ ಅಪಾಯವೂ ಇಲ್ಲದೆ ಸುಖದಿಂದ ಇದ್ದಾಳೆ. ಕಾಮ-ಪ್ರೇಮಿಗಳಿಗೆ ಲಕ್ಷ್ಮಿಯು ಒಲಿಯುವುದಿಲ್ಲ. ನಿಷ್ಕಲ್ಮಷವಾದ ಅವ್ಯಾಜ ಭಕ್ತಿಯಿಂದ ಆಕೆಯನ್ನು ಮೊರೆಹೊಕ್ಕವರಿಗೆ ಅವಳು ಸುಲಭಸಾಧ್ಯಳು.









కంచి పరమాచార్యస్వామి

# ನವಜೀವನ ಅಂಧರ ಸಹಾಯ ಕೇಂದ್ರ (ನೋಂ)

## (ವೃದ್ಧರ, ಅಂಧರ ಉಚಿತ ಆವಾಸ ಕೇಂದ್ರ)

**2-21 ಅ. ಸಪ್ತಗಿರಿ ಆಶ್ರಮ**

**ತಿರುಚಾನೂರು - ತಿರುಪತಿ - 517 503.**

# ಮ ನ ವಿ

ಕಂಚಿಕಾಮಕೋಟಿ ಪೀಠದ ಶ್ರೀ ಶಂಕರಾಚಾರ್ಯರ ವಿಶೇಷ ಅನುಗ್ರಹದಿಂದ ಕಳೆದ 16 ವರ್ಷದಿಂದ ನವಜೀವನ ಆಶ್ರಮ ನೇತ್ರಹೀನರಿಗೆ ವೃದ್ಧರಿಗೆ ಅನೇಕ ಸಹಾಯ ಕಾರ್ಯಗಳನ್ನು ನಿರ್ವಹಿಸುತ್ತಿದೆ.

**ದಾನಗಳಲ್ಲಿ ಶ್ರೇಷ್ಠದಾನ ಅನ್ನದಾನ :** ಎಲ್ಲ ದಾನಗಳಲ್ಲೂ ಅನ್ನದಾನ ಶ್ರೇಷ್ಠವೆಂದು ಪುರಾಣಗಳಲ್ಲಿ ಹೇಳಲ್ಪಟ್ಟಿದೆ. ಅದರಲ್ಲೂ ತಿರುಪತಿ, ರಾಮೇಶ್ವರ ಕಾಶಿ ಮೊದಲಾದ ಪುಣ್ಯಸ್ಥಳಗಳಲ್ಲಿ ಮಾಡುವ ಅನ್ನದಾನದಿಂದ ದಾತರಿಗೆ ದೊಡ್ಡ ಪುಣ್ಯಫಲ ಲಭಿಸುತ್ತದೆ.

**ನಾರಾಯಣಸೇವೆ :** ತಿರುಪತಿಯ ನವಜೀವನ ಆಶ್ರಮದಲ್ಲಿ ನಾರಾಯಣ ಸೇವೆಯಾಗಿ ನಿತ್ಯವೂ ಮೂರುಹೊತ್ತು ದಾತರ ನೆರವಿನಿಂದ ನೇತ್ರಹೀನರಿಗೆ, ವೃದ್ಧರಿಗೆ, ಅನಾಥರಿಗೆ ಅನ್ನದಾನ ನಡೆಯುತ್ತಿದೆ. ಒಂದು ದಿನದ ಅನ್ನದಾನಕ್ಕೆ ಸುಮಾರು ರೂ. 500/- ವೆಚ್ಚವಾಗುತ್ತಿದೆ. ದಯೆಯುಳ್ಳ ದಾನಿಗಳು ತಮ್ಮ ಹುಟ್ಟಿದ ದಿನ, ವಿವಾಹದ ದಿನ, ಮಕ್ಕಳ ಜನ್ಮದಿನ, ಅಥವಾ ಕೀರ್ತಿಶೇಷರಾದವರ ಪುಣ್ಯತಿಥಿಯಯಂದು ಒಂದು ದಿನದ ಅನ್ನದಾನಕ್ಕೆ ರೂ. 500/- ವಂತಿಗೆಯನ್ನು ನೀಡಿ ಶ್ರೀ ವೆಂಕಟೇಶ್ವರಸ್ವಾಮಿ ಹಾಗೂ ಶ್ರೀ ಪದ್ಮಾವತೀ ಅಮ್ಮನವರ ಆಶೀರ್ವಾದ ಹೊಂದಬೇಕೆಂದು ಕೋರುತ್ತೇವೆ.

ಅನ್ನದಾನ ಮಾಡುವ ದಾತರ ಗೋತ್ರನಾಮಗಳೊಡನೆ ಶ್ರೀ ವೆಂಕಟೇಶ್ವರಸ್ವಾಮಿ, ಅಲಮೇಲು ಮಂಗಮ್ಮವರಲ್ಲಿ ಪ್ರಾರ್ಥನೆ ಸಲ್ಲಿಸಿ ಪ್ರಸಾದವನ್ನು ಪೋಸ್ಟ್ ಮೂಲಕ ಕಳುಹಿಸಲಾಗುವುದು. ದಾತರು ತಮ್ಮ ವಂತಿಗೆಗಳನ್ನು ಚೆಕ್, ಡಿ.ಡಿ., ಎಂ.ಓ. ಗಳ ಮೂಲಕ ನವಜೀವನ ಬ್ಲೈಂಡ್ ರಿಲೀಫ್‌ಸೆಂಟರ್ ತಿರುಪತಿ - ಇವರ ಹೆಸರಿಗೆ ಕಳುಹಿಸಬೇಕೆಂದು ಕೋರುತ್ತೇವೆ.

**|| ಶ್ರೇಯೋ ಭೂಯಾತ್ ಸಕಲ ಜನಾನಾಮ್ ||**

**ಫೋನ್** - 25992,
ನವಜೀವನ ಅಂಧರ ಸಹಾಯಕೇಂದ್ರ,
**ಸಪ್ತಗಿರಿ ಆಶ್ರಮ** - ತಿರುಚಾನೂರು,
**ತಿರುಪತಿ** - 517 503

ಮಾನವ - ಮಾಧವ ಸೇವೆಯಲ್ಲಿ
**ಸ್ವಾಮಿ ಶ್ರೀಧರ ಆಚಾರ್ಯ**
ಸಂಸ್ಥಾಪಕರು / ಅಧ್ಯಕ್ಷರು.

# ತಿರುವಾಯ್ಮೊಳಿಯ ಹಿರಿಮೆ

---ವಿದ್ವಾನ್ 'ರಘುಸುತ'.

ಆಳ್ವಾರುಗಳಲ್ಲೆಲ್ಲಾ ಅತ್ಯಂತ ವೈಭವವನ್ನು ಹೊಂದಿದವರೆಂದರೆ ನಮ್ಮಾಳ್ವಾರ್‌ರವರು. ಆಳ್ವಾರರ ಸರಣಿಯಲ್ಲಿ ಇವರು ಹನ್ನೊಂದನೆಯವರಾದರೂ, ಕೊನೆಯವರೆಂದೇ ಖ್ಯಾತಿ ಪಡೆದವರು. ಇವರ ನಂತರ ಇವರ ಶಿಷ್ಯರಾದ ಮಧುರಕವಿಯವರು ಬಂದು, ಹನ್ನೆರಡನೆಯ ಆಳ್ವಾರರಾದರೂ, ನಮ್ಮಾಳ್ವಾರ್‌ರವರೆ ಆಳ್ವಾರರ ಪರಂಪರೆಯಲ್ಲಿ ಕಟ್ಟ ಕಡೆಯವರಾದ ಪ್ರಮುಖ ಆಳ್ವಾರರಾಗಿರುತ್ತಾರೆ. ಅವರ ಕಾಲ ಕ್ರಿ.ಶ. ಸುಮಾರು ೭೯೮. ಇವರು ಬದುಕಿದ್ದುದು ಕೇವಲ ೩೫ ವರ್ಷಗಳ ಕಾಲ.

ಪಾಂಡ್ಯದೇಶದ ತಾಮ್ರಪರ್ಣೀ ತೀರದಲ್ಲಿನ 'ತಿರುಕ್ಕುರುಹೂರ್' (ತಿರುನಗರಿ) ಎಂಬ ಊರಿನಲ್ಲಿ ವೆಳ್ಳಾಳ ವರ್ಣದಲ್ಲಿ ಜನಿಸಿದ ಇವರು 'ಪ್ರಪನ್ನ ಜನ ಕೂಟಸ್ಥ' ರೆಂಬ ಬಿರುದಿಗೆ ಪಾತ್ರರಾದವರು. ಇವರ ತಂದೆತಾಯಿಗಳು ಭಗವದ್ಭಕ್ತರು. ಈ ಕಾರಣ ಅವರು ಜನಿಸಿದ ಶಿಶುವನ್ನು ದೇವಮಂದಿರಕ್ಕೆ ಕರೆದೊಯ್ದರು. ಅಲ್ಲಿ ಶಿಶುವು ಕಣ್ತೆರೆದು ದೇವರನ್ನು ಸಂದರ್ಶಿಸಿತು. ನಂತರ ಜನ್ಮತಃ ಯೋಗಿಯಾದ ಆ ಶಿಶುವು ಅಂಬೆಗಾಲಿಟ್ಟು ತೆವಳಿ, ಹತ್ತಿರವಲ್ಲಿನ ಹುಣಿಸೆ ಮರದಡಿಯಲ್ಲಿ ಕುಳಿತುಬಿಟ್ಟಿತು. ಅಲ್ಲಿ ಪರಮಾತ್ಮನನ್ನು ಧ್ಯಾನಿಸುತ್ತಾ ಕಣ್ಮುಚ್ಚಿ, ಯೋಗ ತಪಸ್ಸಿನಲ್ಲಿ ಇವರು ನಿರತರಾದರು. ಇವರನ್ನು ಅಜ್ಞಾನಕ್ಕೆ ಒಳಪಡಿಸುವ 'ಶಠ' ಎಂಬ ವಾಯುವು ಇವರನ್ನು ಆಕ್ರಮಿಸಲು ಬಂದಾಗ, ಇವರು ಅದನ್ನು ಹೂಂಕಾರದಿಂದ ಓಡಿಸಿದರಂತೆ. ಅದರಿಂದಲೇ ಇವರಿಗೆ 'ಶಠಕೋಪ' ಎಂಬ ಹೆಸರು ಬಂದಿತು. ಅನ್ನಾಹಾರಗಳನ್ನು ಸೇವಿಸದೇ ಇದ್ದರೂನೂ, ಹದಿನಾರು ವರ್ಷಗಳ ಕಾಲ ವಯಸ್ಸಿಗೆ ತಕ್ಕ ಹಾಗೆ ಬೆಳವಣಿಗೆ ಇದ್ದಿತು.

'ಮಾರನ್' ಎಂದೇ ಇವರು ಪ್ರಖ್ಯಾತರಾದವರು. ಈ ವಿಶೇಷವನ್ನು ತಿಳಿದ ಮಧುರಕವಿಯಾಳ್ವಾರ್ ರವರು ಇವರನ್ನು ಸಂದರ್ಶಿಸಲು ಬಂದು, ಇವರು ಕಣ್ತೆರೆದ ನಂತರ,

"ಶೆತ್ತದಿನ್ ವಯಿತ್ತಲ್
ಶಿರಿಯದು ಪಿರಂದಾಲ್,
ಎತ್ತೈ ತಿನ್ರು, ಎಂಗೇ ಕಿಡಕ್ಕುಂ?"



ಎಂದು ಕೇಳಲು,

"ಅತ್ತೈ ತಿನ್ರು ಅಂಗೇ ಕಿಡಕ್ಕುಂ"

ಎಂಬ ಉತ್ತರ ಬಂದಿತು.

ಈ ಉತ್ತರದ ಮಹತ್ವವನ್ನು ಅರಿತ ಮಧುರಕವಿಗಳು ಕೂಡಲೇ ನಮ್ಮಾಳ್ವಾರ್‌ರವರ ಪಾದಗಳಿಗೆ ವಂದಿಸಿ, ಅವರನ್ನು ತಮ್ಮ ಗುರುಗಳನ್ನಾಗಿ ಸ್ವೀಕರಿಸಿದರು. ತದನಂತರದಲ್ಲಿ ಅವರಿಂದ ಉಪದೇಶಗಳನ್ನು ಪಡೆದು, ಇತರರೂ ಅದರ ಸವಿಯನ್ನು ಪಡೆಯುವಂತೆ ಮಾಡಿದರು. ಹೀಗೆ ಆಳ್ವಾರ್‌ರವರ ಬಾಯಿಂದ ಹೊರಬಿದ್ದ ಉಪದೇಶಗಳನ್ನು ಸಂಗ್ರಹಿಸಿ, ಈ ಲೋಕಕ್ಕೆ ನೀಡಿದ್ದೇ ಅಲ್ಲದೆ, ಮಧುರಕವಿಗಳು ಅವರನ್ನು ತಮ್ಮ ಆಚಾರ್ಯರನ್ನಾಗಿ ಸ್ವೀಕರಿಸಿದರು. ಈ ರೀತಿಯಲ್ಲಿ ಆಚಾರ್ಯ ಪರಂಪರೆಗೆ ಮಧುರಕವಿಗಳು ನಾಂದಿಯನ್ನು ಹಾಡಿದರು. ಅಂತೆಯೇ ನಮ್ಮಾಳ್ವಾರ್‌ರವರು ಮಧುರಕವಿಗಳಿಗೆ ತತ್ವ ಹಿತ ಪುರುಷಾರ್ಥಗಳನ್ನು ಉಪದೇಶಿಸಿ, 'ಪ್ರಥಮ ಆಚಾರ್ಯ'ರೆಂಬ ಬಿರುದನ್ನು ಸಾರ್ಥಕಪಡಿಸಿಕೊಂಡರು.

ನಮ್ಮಾಳ್ವಾರ್‌ರವರು ತಿರುವಿರುತ್ತಂ, ತಿರುವಾಶಿರಿಯಂ, ಪೆರಿಯ ತಿರುವಂದಾದಿ ಹಾಗೂ ತಿರುವಾಯ್ಮೊಳಿ ಎನ್ನುವ ನಾಲ್ಕು ಕೃತಿಗಳನ್ನು ರಚಿಸಿದರು. ವೇದಗಳು, ಉಪನಿಷತ್ತು, ಗೀತೆ ಮೊದಲಾದವುಗಳ ಸಾರಸರ್ವಸ್ವವನ್ನು ಈ ನಾಲ್ಕೂ ಕೃತಿಗಳಲ್ಲಿ ತುಂಬಿಸಿದ್ದಾರೆ. ತಿರುವಿರುತ್ತಂ ಋಗ್ವೇದದ ಸಾರವೆಂದೂ, ತಿರುವಾಶಿರಿಯಂ ಯಜುರ್ವೇದದ ಸಾರವೆಂದೂ, ಪೆರಿಯ ತಿರುವಂದಾದಿ ಅಥರ್ವವೇದದ ಸಾರವೆಂದೂ, ತಿರುವಾಯ್ಮೊಳಿಯು ಸಕಲ ವೇದಾಂತಗಳ ಸಾರವೆಂದೂ ಹೇಳಲಾಗುತ್ತದೆ.

ಅವರಲ್ಲಿಯೂ 'ತಿರುವಾಯ್ಮೊಳಿ'ಯು ಚತುರ್ವೇದಗಳ ಸಾರಾರ್ಥವನ್ನೂ ಒಳಗೊಂಡಿರುವುದೇ ಅಲ್ಲದೆ ಭಗವತ್ ಸ್ವರೂಪ, ಜೀವಸ್ವರೂಪ, ಮೋಕ್ಷೋಪಾಯ ಸ್ವರೂಪ, ಫಲ ಸ್ವರೂಪ, ವಿರೋಧಿ ಸ್ವರೂಪ - ಎನ್ನುವ ಅರ್ಥ ಪಂಚಕಗಳನ್ನು ಈ ಮಹಾನ್ ಕೃತಿಯು ಪ್ರತಿಪಾದಿಸುತ್ತದೆ. ನಾಲಾಯಿರ ದಿವ್ಯಪ್ರಬಂಧಗಳಿಗೇ ಈ ಮಹತ್ ಕೃತಿಯು ಕಿರೀಟಪ್ರಾಯವಾಗಿದೆ ಎನ್ನುವುದರಲ್ಲಿ ಯಾವುದೇ ಅನುಮಾನವೂ ಇಲ್ಲ. ಅದರಿಂದಲೇ ಈ ಗ್ರಂಥವು 'ದ್ರಾವಿಡವೇದ ಸಾಗರ' ಎಂಬ ಹೆಸರನ್ನು ಪಡೆದಿದೆ. ಇದು ಅನ್ವರ್ಥವೂ ಹೌದು.

ತಮ್ಮಲ್ಲಿನ ದಿವ್ಯಜ್ಞಾನದಿಂದ ಪಡೆದ ಭಗವತ್ ಸಾಕ್ಷಾತ್ಕಾರವನ್ನು ಆಳ್ವಾರ್‌ರವರು ಈ ಗ್ರಂಥದಲ್ಲಿ ನಿರೂಪಿಸಿದ್ದಾರೆ. ಈ ಗ್ರಂಥದಲ್ಲಿನ ೧೧೦೨ ಪಾಶುರಗಳು ಹತ್ತು ಪತ್ತು (ಶತಕ)ಗಳಾಗಿ ವಿಭಾಗಿಸಲ್ಪಟ್ಟಿವೆ. ಪ್ರತಿಯೊಂದು ಪತ್ತಿನಲ್ಲಿಯೂ ಹತ್ತು ದಶಕಗಳಿವೆ.

ಮೊದಲ ಶತಕದಲ್ಲಿ ಭಗವಂತನು ಮೋಕ್ಷೋಪಾಯನೆಂದೂ, ೨ನೇ ಶತಕದಲ್ಲಿ ವಿಶಿಷ್ಟ ಭೋಗ್ಯತೆಯ ಕಾರಣ ಆ ಭಗವಂತನು ಪರಮ ಪ್ರಾಪ್ಯನೆಂದೂ, ೩ನೇ ಶತಕದಲ್ಲಿ ಆ ಭಗವಂತನು ಸಾಧನನೂ, ಫಲವೂ ಆಗಿರುವನೆಂದೂ, ೪ ನೇ ಶತಕದಲ್ಲಿ ಭಗವಂತನ ವಿನಹ ಬೇರೆ ಯಾವುದೂ ಪ್ರಾಪ್ಯವಾಗಲು ಅರ್ಹವಲ್ಲವೆಂದೂ, ಉಳಿದ ಶತಕಗಳಲ್ಲಿ ಭಗವಂತನ ಅನನ್ಯೋಪಾಯತ್ವವನ್ನೂ ಸಮರ್ಥಿಸಲಾಗಿದೆ. ಹೀಗೆ ಪ್ರತಿಯೊಂದು ಶತಕದ ಪ್ರತಿಯೊಂದು ದಶಕವೂ, ಒಂದೊಂದು ಪಾಶುರವೂ ಅವನ ಅನಂತಕಲ್ಯಾಣಗುಣಗಳಲ್ಲಿ ಒಂದೊಂದನ್ನು ಕೊಂಡಾಡುತ್ತವೆ. ಆ ಕಲ್ಯಾಣಗುಣಗಳನ್ನು ಈ

★★★★★★★★★★★★★★

## ಮಾರಾಟಕ್ಕೆ ಸಿದ್ಧವಾಗಿರುವ ಪುಸ್ತಕಗಳು

**ಶ್ರೀ ವೆಂಕಟೇಶ ಸುಪ್ರಭಾತ**
**ವ್ಯಾಖ್ಯಾನ ಸಹಿತ** ಬೆಲೆ : 2-50

**ಗುರು ಶ್ರೀಶ ವಿಠಲದಾಸರ ಕೃತಿಗಳು**
ಸಂ - ಕೆ. ಅಪ್ಪಣ್ಣಾಚಾರ್ಯ ಬೆಲೆ : 6-00

**ದಾಸ ತತ್ತ್ವ ಪ್ರಕಾಶಿಕೆ**
ಸಂ - ಕೆ. ಅಪ್ಪಣ್ಣಾಚಾರ್ಯ ಬೆಲೆ : 10-00

**ಸ್ತೋತ್ರ ಕುಸುಮ ಮಾಲಾ**
ಸಂ - ಎಂ. ಎಸ್. ವೆಂಕಟಾಚಲಂ ಬೆಲೆ : 3-00

**ತ್ಯಾಗರಾಜ ಸ್ವಾಮಿ ಕೃತಿಗಳ ಹಲವು ಮುಖಗಳು**
-ಎಸ್. ಎಸ್. ಮೂರ್ತಿ ಬೆಲೆ : 5-00

**ಭಕ್ತ ಪುರಂದರದಾಸರು**
-ಕೆ. ಅಪ್ಪಣ್ಣಾಚಾರ್ಯ ಬೆಲೆ : 2-60

**ಕರ್ನಾಟಕ ಹರಿದಾಸರು**
ತೆಲುಗು, ಹಿಂದಿ, ಆಂಗ್ಲ, ಕನ್ನಡ ಬೆಲೆ : 2-25

**ಶ್ರೀ ಶ್ರೀನಿವಾಸನ ಹಾಡುಗಳು**
(ಪ್ರಸನ್ನ ವೆಂಕಟದಾಸರು)
ಸಂ - ಕೆ. ಅಪ್ಪಣ್ಣಾಚಾರ್ಯ ಬೆಲೆ : 7-00

**ಶ್ರೀ ಪ್ರಸನ್ನ ವೆಂಕಟದಾಸರು**
- ವಿ. ಬಾದರಾಯಣ ಮೂರ್ತಿ ಬೆಲೆ : 0-80

**ಶ್ರೀ ಮಹಿಪತಿ ದಾಸರು**
- ದ. ನ. ಶಾನಭಾಗ ಬೆಲೆ : 0-85

ಅಂಚೆ ವೆಚ್ಚ ಪ್ರತ್ಯೇಕ. ಸಗಟು ಖರೀದಿಗೆ ಆಕರ್ಷಕ ಕಮಿಷನ್ ಉಂಟು. ಕೂಡಲೇ ಬರೆಯಿರಿ.

ಸಂಪಾದಕರು
ಪುಸ್ತಕ ಮಾರಾಟ ವಿಭಾಗ,
ಸಪ್ತಗಿರಿ, ತಿ.ತಿ.ದೇ., ತಿರುಪತಿ.

★★★★★★★★★★★★★★

ತಿರುವಾಯ್ಮೊಳಿಯ ಶತಕಗಳ ತಾತ್ಪರ್ಯ ಸಂಗ್ರಹವನ್ನು ಪನ್ನಿರಾಪ್ಪಡಿ ಹಾಗೂ, ಮುಪ್ಪತ್ತಾರಾಯಿರಪ್ಪಡಿಗಳಲ್ಲಿ ಈ ರೀತಿಯಲ್ಲಿ ವಿವರಿಸಲಿ

| ಶತಕ | ಪನ್ನೀರಾಯಿರಪ್ಪಡಿ | ಮುಪ್ಪತ್ತಾರಾಯಿರಪ್ಪಡಿ |
|---|---|---|
| 1ನೇ ಶತಕ | ಭಗವಂತನ ರಕ್ಷಕತ್ವ | ಭಗವತ್ ಕೈಂಕರ್ಯವೇ ಪುರುಷಾರ್ಥ |
| 2 ನೇ ಶತಕ | ಭೋಗ್ಯತ್ವ | ತದೇಕ ಭೋಗ್ಯತ್ವವೇ ಪುರುಷಾರ್ಥ |
| 3 ನೇ ಶತಕ | ತದೇಕಾನುಭವ | ಅರ್ಚಾವತಾರ ವಿಷಯದಲ್ಲಿ ವಾಚಿಕ ಕೈಂಕರ್ಯ |
| 4 ನೇ ಶತಕ | ತದೇಕ ಪ್ರಿಯತ್ವ | ಭಗವಚ್ಚರಣಯುಗಳವೇ ಶರಣು |
| 5 ನೇ ಶತಕ | ನಿರಪಾಯೋಪಾಯತ್ವ | ಭಗವಂತನ ಸಿದ್ಧೋಪಾಯತ್ವ |
| 6 ನೇ ಶತಕ | ಉಪಾಯವರಣ ಪ್ರಕಾರ | ಸಿದ್ಧೋಪಾಯ ಸ್ವೀಕಾರ ಕ್ರಮ ಲಕ್ಷ್ಮೀಪುರುಷಾಕಾರ ಪೂರ್ವಕವಾದ ಶರಣವರಣ |
| 7ನೇ ಶತಕ | ವಿರೋಧಿಸ್ವರೂಪ ವರ್ಣನ | ಬಾಹ್ಯ ಸಂಶ್ಲೇಷಾಪೇಕ್ಷೆ |
| 8ನೇ ಶತಕ | ವಿರೋಧಿ ನಿವೃತ್ತಿ ಪ್ರಕಾರ | ಅಹಂಕಾರ, ಮಮಕಾರತ್ಯಾಗ |
| 9ನೇ ಶತಕ | ಫಲಸ್ವರೂಪ ವರ್ಣನ | ಭಗವಂತನ ಸೌಶೀಲ್ಯಾದಿ ಗುಣಾನುಭವ |
| 10ನೇ ಶತಕ | ಫಲಪ್ರಾಪ್ತಿ | ಅರ್ಚಿರಾದಿಗಳ ಮುಖಾಂತರ ಮೋಕ್ಷಪ್ರಾಪ್ತಿ |

ಸಹಸ್ರ ಗಾಥೆಗಳಲ್ಲಿ ಸಾವಿರ ರೀತಿಗಳಲ್ಲಿ ಕೊಂಡಾಡಲಾಗಿದೆ.

ಈ ಶತಕಗಳಲ್ಲಿ ಒಂದರಿಂದ ಹತ್ತರವರೆಗೆ ಕ್ರಮವಾಗಿ ೧) ಭಗವಂತನ ಸೇವ್ಯತ್ವ, ೨) ಅವನ ಭೋಗತ್ವ, ೩) ಅವನ ದಿವ್ಯ ಮಂಗಳ ವಿಗ್ರಹತ್ವ, ೪) ಅವನ ಸರ್ವ ಭೋಗ್ಯಾಧಿಕತ್ವ, ೫) ಪುರುಷಾರ್ಥಕ್ಕೂ ಅದನ್ನು ಪಡೆಯುವುದಕ್ಕೆ ಕಾರಣನಾಗಿರುವುದನ್ನೂ, ೬) ಅವನು ಪ್ರಪನ್ನರಿಗೆ ಸುಲಭನಾಗಿರುವುದನ್ನೂ, ೭) ಆಶ್ರಿತರ ಅನಿಷ್ಟ ನಿವರ್ತಕತ್ವವನ್ನೂ, ೮) ಆಶ್ರಿತರ ಇಷ್ಟಕ್ಕೆ ಅನುಸಾರ ನಡೆಯುವುದನ್ನೂ, ೯) ಸಹಜಸುಹೃತ್ವವನ್ನೂ, ೧೦) ಸತ್ವದವೀ ಸಹಾಯತ್ವವನ್ನೂ - ಆಳ್ವಾರರು ನಿರೂಪಿಸಿದ್ದಾರೆ ಎಂದು ವೇದಾಂತ ದೇಶಿಕರು ಭಗವದ್ಗುಣಗಳನ್ನು ಸಂಗ್ರಹವಾಗಿ ವಿವರಿಸಿದ್ದಾರೆ.

ದರ್ಶನ ಸ್ಥಾಪನಾಚಾರ್ಯರುಗಳಾದ ಯಾಮುನ, ರಾಮಾನುಜ ಇತ್ಯಾದಿಯವರುಗಳು ಶ್ರುತಿ, ಸ್ಮೃತಿಗಳ ಅರ್ಥಗಳನ್ನು ತೀರ್ಮಾನಿಸುವಲ್ಲಿ ನಮ್ಮಾಳ್ವಾರ್‌ರವರ ಶ್ರೀ ಸೂಕ್ತಿಗಳಿಂದ ಸ್ಫೂರ್ತಿಯನ್ನು ಪಡೆದಿದ್ದಾರೆ.

ಶ್ರೀಮನ್ನಾರಾಯಣನೇ ಪರತತ್ವ. ಪರಮಾತ್ಮನಿಗೂ, ಜೀವಾತ್ಮರಿಗೂ ಇರುವ ಭೇದವು ಸತ್ಯವಾದುದು. ಆ ಭಗವಂತನನ್ನು ಪಡೆಯಲು, ಅವನನ್ನು ಪ್ರಸನ್ನಗೊಳಿಸಲು ಭಕ್ತಿ ಪ್ರಪತ್ತಿಗಳೇ ಪುರುಷಾರ್ಥಗಳು. ಸಕಲ ಕಲ್ಯಾಣ ಗುಣ ಪರಿಪೂರ್ಣಪರಮ ಪುರುಷಾರ್ಥ - ಎಂಬುದೆಲ್ಲವನ್ನೂ ತಿರುವಾಯ್ಮೊಳಿ ಗ್ರಂಥವು ಪ್ರತಿಪಾದಿಸುತ್ತದೆ. ಪವಿತ್ರವಾದ ದ್ವಯ ಮಂತ್ರದ ಅರ್ಥ ವಿಶೇಷಗಳನ್ನೂ ಇದು ಒಳಗೊಂಡಿದೆ. ಅದರಿಂದ ಈ ಪ್ರಬಂಧವನ್ನು ನಿತ್ಯವೂ, ಸಕಲರೂ ಅನುಸಂಧಾನ ಮಾಡಬೇಕಾದುದು ಅವಶ್ಯಕ.

ಇಂತಹ ದಿವ್ಯಪ್ರಬಂಧವು ತಮಿಳಿನಲ್ಲಿಯೇ ಇದ್ದರೂ, ಸುಮಾರು ಹನ್ನೆರಡು ಶತಮಾನಗಳಿಂ

| ವ್ಯಾಖ್ಯಾನ | ಗ್ರಂಥಗಳು | ಕರ್ತೃ |
|---|---|---|
| 1. ಆರಾಯಿರಪ್ಪಡಿ | 6,000 ಗ್ರಂಥಗಳು | ತಿರುಕ್ಕುರುಹೈಪ್ಪಿರಾನ್ ಪಿಳ್ಳಾನ್ |
| 2. ಒನ್ಪದಿ ನಾಯಿರಪ್ಪಡಿ | 9,000 ಗ್ರಂಥಗಳು | ನಂಜೀಯರ್ |
| 3. ಪನ್ನೀರಾಯಿರಪ್ಪಡಿ | 12,000 ಗ್ರಂಥಗಳು | ಅಳಿಹಿಯ ಮಣವಾಳಜೀಯರ್ |
| 4. ಇರುಪ್ಪತ್ತು ನಾಲಾಯಿರಪ್ಪಡಿ | 24,000ಗ್ರಂಥಗಳು | ಪೆರಿಯವಾಚ್ಚಾನ್ ಪಿಳ್ಳೈ |
| 5. ಮುಪ್ಪತ್ತಾರಾಯಿರಪ್ಪಡಿ (ಈಡು) | 36,000 ಗ್ರಂಥಗಳು | ವಡಕ್ಕುತ್ತಿರುವೀಧಿ ಪಿಳ್ಳೈ |

ದಲೂ ಅನೇಕ ಬುದ್ಧಿಜೀವಿಗಳ ಮನಸ್ಸು, ಹೃದಯಗಳನ್ನು ಗೆದ್ದಿವೆ. ಇವರ ಮುಖಾಂತರ ವಿಶಿಷ್ಟಾದ್ವೈತ ಸಿದ್ಧಾಂತವನ್ನು ಪ್ರತಿಪಾದಿಸಲಾಗಿದೆ. ಕ್ಲಿಷ್ಟವಾದದ್ದರಿಂದ ಅಲ್ಲದೆ ಅನೇಕ ವ್ಯಾಖ್ಯಾನಗಳೂ ಹುಟ್ಟಿಕೊಂಡಿವೆ. ಅವುಗಳಲ್ಲಿ ಮುಖ್ಯವಾದುವು ಐದು. ಇವನ್ನು ಪಂಚ ಮಹಾ ವ್ಯಾಖ್ಯಾನಗಳೆಂದು ತಿಳಿಸಲಾಗಿದೆ. ಇವು ಮಣಿಪ್ರವಾಳ ಶೈಲಿಯಲ್ಲಿವೆ.

ಆಚಾರ್ಯ ರಾಮಾನುಜರ ನಂತರವೇ ಈ ವ್ಯಾಖ್ಯಾನಗಳು ಆವಿರ್ಭವಿಸಿರುವುದು ಒಂದು ವಿಶೇಷ. ಅದುವರೆವಿಗೂ ಜನ ಸಾಮಾನ್ಯರನ್ನು ಅಷ್ಟಾಗಿ ತಲುಪದೆ ಪಂಡಿತ ಮಂಡಳಿಯ ನಡುವೆಯೇ ಸಂಚರಿಸುತ್ತಿದ್ದ ತಿರುವಾಯ್ಮೊಳಿ ಗ್ರಂಥವು ಎಲ್ಲರೂ ಅರ್ಥಮಾಡಿಕೊಳ್ಳಲು ಅನುಕೂಲವಾಗುವಂತೆ, ಅದರ ಬಗ್ಗೆ ಪ್ರವಚನಗಳನ್ನು ಆಚಾರ್ಯರು ನೀಡುತ್ತಿದ್ದುದು ಸಾಮಾನ್ಯವಿಷಯ. ಆದರೆ ಈ ವ್ಯಾಖ್ಯಾನವು ಆ ಮಟ್ಟದಲ್ಲಿ ನಿಲ್ಲದೆ ಮುಂದಿನ ಪೀಳಿಗೆಗೂ ಉಳಿಯಲಿ ಎನ್ನುವ ಭಾವನೆಯಿಂದ ಆಚಾರ್ಯರು ತಮ್ಮ ನೇರ ಶಿಷ್ಯರಾದ ತಿರುಕ್ಕುರುಹೈಪ್ಪಿರಾನ್ ಪಿಳ್ಳಾನ್‌ರವರಿಗೆ ಆ ವ್ಯಾಖ್ಯಾನವನ್ನು ಗ್ರಂಥಸ್ಥ ಮಾಡುವಂತೆ ಆಜ್ಞಾಪಿಸಿದರು. ಪರಿಣಾಮವಾಗಿ ಪಿಳ್ಳಾನ್‌ರವರು ಪದ್ಯ ತಾತ್ಪರ್ಯ ರೂಪದಲ್ಲಿ ವ್ಯಾಖ್ಯಾನವನ್ನು ರಚಿಸಿದರು. ಸ್ವತಃ ಆಚಾರ್ಯ ರಾಮಾನುಜರೇ ಇದನ್ನು ಪರಾಮರ್ಶಿಸಿ, ಪರ್ಯವೇಕ್ಷಿಸಿ, ತಿರುವಾಯ್ಮೊಳಿಯ ಪಾರಾಯಣ ಕಾಲದಲ್ಲಿ, ಪ್ರವಚನ ಸಮಯದಲ್ಲಿ ಉಪಯೋಗಿಸಲು ಅನುಮತಿ ನೀಡಿದರು. ಹೀಗಾಗಿ ಈ ವ್ಯಾಖ್ಯಾನಕ್ಕೆ ಅತ್ಯಂತ ಪವಿತ್ರವಾದ ಸ್ಥಾನವುಂಟು. ಹಾಗೂ ಮುಂದಿನ ವ್ಯಾಖ್ಯಾನಗಳಿಗೂ ಇದು ಮಾರ್ಗದರ್ಶಕವಾಯಿತು.

ಒನ್ಪದಿನಾಯಿರಪ್ಪಡಿ ಹಾಗೂ ಪನ್ನೀರಾಯಿರಪ್ಪಡಿಗಳು ಪ್ರತಿಪದಾರ್ಥ ವಿವರಣರೂಪವಾಗಿ ಕಾಣಿಸಿಕೊಂಡಿವೆ. ಇವು ಭಾಷಾ ಉತ್ಪತ್ತಿಗೂ, ತಾತ್ಪರ್ಯ ಜ್ಞಾನಕ್ಕೂ ಅತ್ಯಂತ ಉಪಯೋಗಕಾರಿಯಾಗಿವೆ.

ಉಳಿದೆರಡು ವ್ಯಾಖ್ಯಾನಗಳಿಗೂ ನಂಪಿಳ್ಳೈರವರ ಪ್ರವಚನಗಳೇ ಆಧಾರ. ಅವರ ನಿಯಮನದಿಂದಲೇ ಎರಡೂ ರಚಿಸಲ್ಪಟ್ಟಿವೆ. ಅವರು ನೀಡುತ್ತಿದ್ದ ಉಪನ್ಯಾಸಗಳ ಸಾರಾಂಶವನ್ನು ಅವರ ಶಿಷ್ಯರಾದ ಪೆರಿಯ ವಾಚ್ಚಾನ್ ಪಿಳ್ಳೈರವರು ಸಂಗ್ರಹಿಸಿದರು, ಪದ್ಯ ತಾತ್ಪರ್ಯ ವಿವರಣೆ, ಪದ್ಯಗಳಿಗೆ ಸಂಗತಿ, ದಶಕಗಳಿಗೆ ಸಂಗತಿ, ಶತಕಗಳಿಗೆ ಸಂಗತಿ - ಇತ್ಯಾದಿಗಳೆಲ್ಲ ಚೆನ್ನಾಗಿ ಪ್ರಕಾಶಿತವಾಗಿವೆ.

ಪೆರಿಯ ವಾಚ್ಚಾನ್‌ರವರಂತೆ, ನಂಪಿಳ್ಳೈರವರ ಮತ್ತೊಬ್ಬ ಶಿಷ್ಯರಾದ ವಡಕ್ಕುತ್ತಿರುವೀಧಿ ಪಿಳ್ಳೈರವರು ತಮ್ಮ ಗುರುಗಳ ಉಪನ್ಯಾಸ ವಿಷಯವನ್ನು ಮಣಿಪ್ರವಾಳದಲ್ಲಿ ಅನುವಾದ ಮಾಡಿ ರಚಿಸಿದರು. ಇದು ಸವಿಸ್ತಾರವಾಗಿ, ಅತ್ಯಂತ ಸ್ವಾರಸ್ಯವಾಗಿ ತಮ್ಮ ಗುರುಗಳ ಹೇಳಿಕೆಯಂತೆಯೇ ಪ್ರತಿದಿನ ಕಾಲಕ್ಷೇಪಾನಂತರ ಬರೆಯಲ್ಪಡುತ್ತಿತ್ತು. ಇದಕ್ಕೆ ನಂಬಿಳ್ಳೈರವರ ಅನುಮತಿ ಇರಲಿಲ್ಲ. ಕೇವಲ ತಾವು ಚಿಂತನೆ ಮಾಡಿಕೊಳ್ಳುವುದಕ್ಕೋಸ್ಕರ ಬರೆಯಲ್ಪಟ್ಟಿದ್ದು. ಇದು ಗುರುಗಳಿಗೆ ಹೇಗೋ ಗೊತ್ತಾಯಿತು. ಅವರು ತಮ್ಮ ಶಿಷ್ಯರಿಗೆ ಅವರು ಬರೆದಿರುವುದನ್ನು ತಂದು ಒಪ್ಪಿಸುವಂತೆ ಆಜ್ಞಾಪಿಸಿದರು. ಅದರಂತೆಯೇ ವಡಕ್ಕುತ್ತಿರುವೀಧಿಯವರು ತಂದು ಒಪ್ಪಿಸಿದರು. ನಂಪಿಳ್ಳೈರವರು ಅದನ್ನು ಆಮೂಲಾಗ್ರವಾಗಿ ಓದಿ, ಪರಿಶೀಲಿಸಿದರು. ಅದು ತಮ್ಮ ಉಪನ್ಯಾಸಗಳಂತೆಯೇ ಸ್ವಾರಸ್ಯಪೂರ್ಣವಾಗಿ, ಅರ್ಥಗರ್ಭಿತವಾಗಿದ್ದುದನ್ನು ಕಂಡು ಸಂತೋಷಪಟ್ಟರು. ಅಂತರ್ಯದಲ್ಲಿ ಅವರು ಸಂತೋಷಪಟ್ಟರೂ, ಅದನ್ನು ತೋರಗೊಡದೆ, ಆಕ್ಷೇಪಿಸುವ ರೀತಿಯಲ್ಲಿ,

"ನನ್ನ ಅನುಮತಿಯಿಲ್ಲದೆ ಹೇಗೆ ಇದನ್ನು ರಚಿಸಿದಿರಿ?" ಎಂದು ಕೇಳಿದರು.

ದಿಗ್ಭ್ರಾಂತರಾದ ವಡಕ್ಕುತ್ತಿರುವೀಧಿಯವರು ಏನು ಹೇಳಲೂ ತೋರದೆ ಸುಮ್ಮನಾದರು. ಸ್ವಲ್ಪ ಸಮಯದ ನಂತರ ನಂಬಿಳ್ಳೈರವರು,

"ತಾವು ಬರೆದಿರುವುದು ಸೂಕ್ತವಾಗಿದೆ. ಅದು ಸದುಪಯೋಗವಾಗಲಿ!"

ಎಂದು ಶಿಷ್ಯರನ್ನು ಹರಸಿ, ಎಲ್ಲ ವ್ಯಾಖ್ಯಾನಗಳಿಗಿಂತಲೂ ಅದೇ ಸರ್ವಶ್ರೇಷ್ಠವೆಂದೂ, ಎಲ್ಲರ ಕಾಲಕ್ಷೇಪಕ್ಕೂ ಅದು ಅರ್ಹವಾದುದೆಂದು ತಾವು ನಿರ್ಣಯಿಸಿರುವುದಾಗಿಯೂ ತಿಳಿಸಿದರು.

ಅದರಂತೆ ಅಂದಿನಿಂದ ಇಂದಿನವರೆಗೂ ಈ ವ್ಯಾಖ್ಯಾನವು ಹೆಚ್ಚು ಹೆಚ್ಚು ಜನಪ್ರಿಯತೆಯನ್ನು ಪಡೆಯುತ್ತಿದೆ. ಈ ವ್ಯಾಖ್ಯಾನವು ನಾಲ್ಕನೆಯ ವ್ಯಾಖ್ಯಾನದಂತೆ ಸವಿಸ್ತಾರವೂ, ಸ್ವಾರಸ್ಯ ಭರಿತವೂ ಆಗಿದ್ದು, ವಿಶೇಷವಾಗಿ ಕಾಲಕ್ಷೇಪಗಳಲ್ಲಿ ಪಾರಾಯಣ ಮಾಡಲ್ಪಡುತ್ತಿದೆ. ಇದು ಸಾರತಮವಾಗಿ, ಅಮೃತ ರಸ ಘನವಾದ ಮಹಾನಿಧಿಯಾಗಿರುವುದರಿಂದ, ಇದಕ್ಕೆ 'ಈಡು' ಎಂಬ ಹೆಸರನ್ನು ನೀಡಲಾಗಿದೆ.

ಈ ಐದೂ ವ್ಯಾಖ್ಯಾನಗಳೂ 'ಭಗದ್ವಿಷಯ' ಎನ್ನುವ ಹತ್ತು ಸಂಪುಟಗಳಲ್ಲಿ ಪಂಡಿತರಿಂದ ಪರಿಶೋಧಿಸಲ್ಪಟ್ಟು ಪ್ರಕಟವಾಗಿವೆ.

ಈ ರೀತಿಯಲ್ಲಿ ತಿರುವಾಯ್ಮೊಳಿ ಪ್ರಬಂಧದಲ್ಲಿನ ಮಹತ್ ಗುಣಗಳನ್ನು ಹೊರತರುವುದರಲ್ಲಿ ಈ ವ್ಯಾಖ್ಯಾನಗಳು ಸಫಲವಾಗಿವೆ. ಮಾನವನು ಅರಿಯದೇಕಾದ ತತ್ವಹಿತ ಪುರುಷಾರ್ಥಗಳನ್ನು ಈ ಪ್ರಬಂಧವು ನೇರವಾಗಿ ತಿಳಿಸುತ್ತದೆ. ಪರಮಪ್ರಮಾಣವಾದ ವೇದಗಳ ಉಪದೇಶಸಾರವನ್ನು ಹೊಂದಿರುವ ತಿರುವಾಯ್ಮೊಳಿಯು ಯಾವ ರೀತಿಯಲ್ಲಿ ವೇದಗಳಿಗೆ ಸರಿಸಮಾನವಾಗಿ ಪರಮ ಪಾವನವಾದ 'ತಮಿಳು ವೇದ'ವಾಗಿದೆ ಎಂಬುದನ್ನು ಈ ವ್ಯಾಖ್ಯಾನಗಳು ವಿವರಿಸುತ್ತವೆ. ಪರಮಾತ್ಮನ ಸ್ವರೂಪ, ಸ್ವಭಾವಗಳನ್ನು ಈ ಪ್ರಬಂಧವು ಕಣ್ಣಿಗೆ ಕಟ್ಟುವಂತೆ ವಿವರಿಸುತ್ತದೆ. ಐಹಿಕ ಐಶ್ವರ್ಯ, ಕೈವಲ್ಯಗಳಷ್ಟೆ ಪುರುಷಾರ್ಥವಲ್ಲ, ಭಗವಂತನ ನಿತ್ಯ ಕೈಂಕರ್ಯ ಮಾಡಿ, ಅವನನ್ನು ಸೇರುವುದೇ ಪರಮ ಪುರುಷಾರ್ಥ ಎಂಬುದನ್ನು ಈ ಕೃತಿ ಪ್ರತಿಪಾದಿಸುತ್ತದೆ. ಭಗವಂತನಲ್ಲಿ ನಿರತಿಶಯ, ಪ್ರೀತಿರೂಪ ಭಕ್ತಿಯನ್ನು ಮೂಡಿಸಿ, ದೆಳೆಸುತ್ತವೆ.

ತಿರುವಾಯ್ಮೊಳಿಯಲ್ಲಿ ದ್ವಯಮಂತ್ರದ ಮಹತ್ವದ ಪ್ರತಿಪಾದನೆಯಿದೆ. ಇದರಲ್ಲಿನ ಮೊದಲ ಮೂರು ಶತಕಗಳು ದ್ವಯಮಂತ್ರದ ಉತ್ತರಾರ್ಧವನ್ನು ಪ್ರತಿಪಾದಿಸುತ್ತವೆ. ಪೂರ್ವಾರ್ಧದ ಅರ್ಥಗಳನ್ನು ವಿವರಿಸುತ್ತವೆ. ಏಳು, ಎಂಟು, ಒಂಬತ್ತನೆಯ ಶತಕಗಳು ಉಪಾಯೋಪಯೋಗಿಯಾದ ಗುಣಗಳನ್ನೂ, ಆತ್ಮಾತ್ಮೀಯಗಳಲ್ಲಿ ಮಗ್ನವಾಗಿರುವ ಆಸಕ್ತಿಯನ್ನು ಬಿಡುವ ವಿಧಾನವನ್ನೂ, ಭಗವಂತನೊಡನೆ ಚೇತನನಿಗೆ ಇರುವ ನಿರುಪಾಧಿಕ ಸಂಬಂಧವನ್ನು ನಿರೂಪಿಸುತ್ತವೆ. ಅಂತೆಯೇ ಹತ್ತನೇ ಶತಕವು ಫಲಪ್ರಾಪ್ತಿಯನ್ನು ನಿರೂಪಿಸುತ್ತದೆ.

ಸಕಲವೇದ ಸಂಗ್ರಹವೇ ಮೂಲಮಂತ್ರ. ಈ ಮೂಲಮಂತ್ರದ ಸಂಗ್ರಹವೇ ಪ್ರಣವ. ಪ್ರಣವದ ಸಂಗ್ರಹವೇ ಅಕಾರ. ಇದೇ ರೀತಿಯಲ್ಲಿ ತಿರುವಾಯ್ಮೊಳಿಯ ಸಂಗ್ರಹವು ಅದರ ಮೊದಲ ಶತಕದಲ್ಲಿದೆ. ಮೊದಲ ಶತಕದ ಸಂಗ್ರಹವು, ಆ ಶತಕದ ಮೊದಲ ಮೂರು ಪಾಶುರಗಳಲ್ಲಿದೆ. ಅಂತೆಯೇ ಈ ಮೂರು ಪಾಶುರಗಳ ಸಂಗ್ರಹವು ಮೊದಲ ಪಾಶುರದ ಮೊದಲ ಪಾದವಾದ 'ಉಯರ್ವು ಅರ ಉಯರ್‌ನಲಂ ಉಡೈಯವನ್ ಯವನವನ್' ಎಂಬುದರಲ್ಲಿ ಸಂಗ್ರಹವಾಗಿದೆಯೆಂದೂ 'ಈಡು' ವ್ಯಾಖ್ಯಾನವು ಅರ್ಥಪೂರ್ಣವಾಗಿ ವಿವರಿಸುತ್ತದೆ.

ಈ ರೀತಿಯಲ್ಲಿ ವಿಶಿಷ್ಟಾದ್ವೈತ ಸಿದ್ಧಾಂತಕ್ಕೆ ನಿಷ್ಕೃಷ್ಟ ರೂಪ ನೀಡಿದ ತಿರುವಾಯ್ಮೊಳಿಯು ಉತ್ತಮ ಕೋಟಿ ಕಾವ್ಯವಾಗಿದೆ.



(ಸಂಗ್ರಹ)

# ಲೋಕಬಂಧು ದೇಶಿಕರು

—ಕೆ. ಎಸ್. ಶ್ರೀವತ್ಸ



ಸ್ವಾಮಿ ವೇದಾಂತ ದೇಶಿಕರನ್ನು ಸಾಮಾನ್ಯವಾಗಿ ಎಲ್ಲರೂ ಪ್ರಕಾಂಡ ಪಂಡಿತರು ಹಾಗೂ ಪ್ರತಿಭಾವಂತ ಕವಿ ಎಂದು ಭಾವಿಸಿರುವುದು ಕಂಡುಬಂದಿದೆ. ಅವರ ಕೃತಿಗಳನ್ನು ಓದಿದವರಿಗೆ, ಅವರ ವೈದುಷ್ಯ ಕವಿತಾ ಸಾಮರ್ಥ್ಯಗಳ ಅರಿವು ಉಂಟಾಗಿ, ಅವರ ಬಗೆಗೆ ಪೂಜ್ಯ ಭಾವನೆ ಉದಯಿಸುತ್ತದೆ. ಆದರೆ ಅವರು ಒಬ್ಬ ಲೋಕ ಬಂಧು, ಹಾಗೂ ಅತ್ಯಂತ ಸರಳ, ಮತ್ತು ವಿವಾದರಹಿತ ಆಚಾರ್ಯರೆಂಬ ಸಂಗತಿ ಅನೇಕರಿಗೆ ತಿಳಿದಿಲ್ಲ. ಅವರ ಜೀವನದಲ್ಲಿ ನಡೆದ ಅನೇಕ ಪ್ರಸಂಗಗಳು ಇವನ್ನು ಪುಷ್ಟೀಕರಿಸುತ್ತವೆ. ಕೆಲವನ್ನು ಇಲ್ಲಿ ಉದಾಹರಿಸಲಾಗಿದೆ.

ಸರ್ವಸಂಗಪರಿತ್ಯಾಗ ಮಾಡಿ, ಸನ್ಯಾಸ ಸ್ವೀಕರಿಸಿ ಉಂಛವೃತ್ತಿ ನಡೆಸುವುದು ಸುಲಭ. ಆದರೆ ಗೃಹಸ್ಥನಾಗಿದ್ದುಕೊಂಡು, ಸಂಸಾರದ ಭಾರವನ್ನು ಹೊತ್ತು ಅತ್ಯಂತ ವೈರಾಗ್ಯದಿಂದ ಜೀವನವನ್ನು ಸಂತೋಷದಿಂದ ನಡೆಸುವುದು ಬಹು ಪ್ರಯಾಸವೇ ಸರಿ. ಸ್ವಾಮಿ ವೇದಾಂತ ದೇಶಿಕರು ಅಂತಹ ಸರಳ ಜೀವನ ನಡೆಸಿದವರು. ವಿದ್ಯಾರಣ್ಯರು, ಅವರ ಸ್ನೇಹಿತರು ಮತ್ತು ಸಮಕಾಲೀನರಾಗಿದ್ದರು. ಅವರು ದೇಶಿಕರ ಬಡತನದ ಪಾಡನ್ನು ನೆನೆದು, ವಿಜಯನಗರದ ಅರಸರ ಆಸ್ಥಾನಕ್ಕೆ ಬರುವಂತೆ ಆಹ್ವಾನಿಸಿದರು. ಅದನ್ನು ನಯವಾಗಿಯೇ ತಿರಸ್ಕರಿಸಿದ ವೇದಾಂತದೇಶಿಕರು "ವೈರಾಗ್ಯ ಪಂಚಕ"ವೆಂಬ ಸ್ತೋತ್ರದ ಮೂಲಕ ತಮ್ಮ ಉತ್ತರವನ್ನು ಕಳುಹಿಸಿದರು. ಅದರಲ್ಲಿ "ಆಶೆಯನ್ನು ಬಿಟ್ಟವರಿಗೆ, ರಾಜನಿಂದ ಯಾವ ಪ್ರಯೋಜನವೂ ಬೇಕಿಲ್ಲ. ಗದ್ದೆಯಲ್ಲಿ ಬಿದ್ದಿರುವ ಕಾಳುಗಳನ್ನು ಆಯ್ದುಕೊಂಡು ಜೀವನವನ್ನು ನಡೆಸಬಹುದು. ಅದಕ್ಕಾಗಿ ಕ್ಷುದ್ರ ಜನರನ್ನು ಹೊಗಳುವುದು ನನಗೆ ಬೇಕಿಲ್ಲ.

ನಾಸ್ತಿ ಪಿತ್ರಾರ್ಜಿತಂ ಕಿಂಚಿತ್
ನಮಯಾ ಕಿಂಚಿದಾರ್ಜಿತಂ
ಅಸ್ತಿ ಮೇ ಹಸ್ತಿ ಶೈಲಾಗ್ರೇ
ವಸ್ತು ಪೈತಾಮಹಂ ಧನಂ

ನಾನು ಯಾವ ಆಸ್ತಿಯನ್ನು ಸಂಪಾದಿಸಿಲ್ಲ ನನಗೆ ಪಿತ್ರಾರ್ಜಿತ ಆಸ್ತಿಯೂ ಇಲ್ಲ. ನನಗೆ ಎಲ್ಲವೂ ಹಸ್ತಿಗಿರಿ ಒಡೆಯನಾದ ಶ್ರೀ ವರದರಾಜನೇ" ಎಂಬುದಾಗಿ ತಮ್ಮ ವೈರಾಗ್ಯದ, ಸರಳತೆಯ ಪರಾಕಾಷ್ಠೆಯನ್ನು ಮೆರೆದರು. ಗೃಹಸ್ಥರಾಗಿದ್ದೂ, ಮಕ್ಕಳನ್ನೂ ಹೊಂದಿದ್ದು ಈ ರೀತಿಯ ಅನಾಯಾಸವಾಗಿ ಬಂದ ರಾಜಾಶ್ರಯವನ್ನು ತಿರಸ್ಕರಿಸುವುದು ಅತ್ಯಂತ ವಿರಳ, ಈಗಿನ ಕಾಲದಲ್ಲಂತೂ ಪ್ರಾಯಶಃ ಇಲ್ಲವೇ ಇಲ್ಲ ಎನ್ನಬಹುದು. ಸ್ವಾಮಿ ದೇಶಿಕರು ಉತ್ತಮ ಮಟ್ಟದ ಮಾನವೀಯ ಗುಣಗಳನ್ನು ಹೊಂದಿದ್ದ ವ್ಯಕ್ತಿಯಾಗಿದ್ದರು. ಒಮ್ಮೆ ಒಬ್ಬಾನೊಬ್ಬ ಪುರುಷನು ಅವರನ್ನು ತಮ್ಮ ಮನೆಗೆ ಆಹ್ವಾನಿಸಿ, ಅವರು ಬರುವ ದಾರಿಯಲ್ಲಿ ಚಪ್ಪಲಿಗಳ ತೋರಣವನ್ನು ಕಟ್ಟಿ ಅವರನ್ನು ಅವಮಾನಿಸಬೇಕೆಂದು ಪ್ರಯತ್ನಿಸಿದಾಗ, ಶ್ರೀ ದೇಶಿಕರು, ಅದನ್ನು ಅತ್ಯಂತ ಸಹನೆಯಿಂದ ಸ್ವೀಕರಿಸಿ "ಕರ್ಮಾವಲಂಬಕಾ ಕೇಚಿತ್ ಕೇಚಿತ್ ಜ್ಞಾನಾವಲಂಬಕಾಃ ವಯಃ ತು ಹರಿದಾಸಾನಾಂ ಪಾದರಕ್ಷಾವಲಂಬಕಾಃ ಎಂದು ಹೇಳಿ ಅವನನ್ನು ಸರಿಗೊಳಿಸಿದರು.

ತಾವು ಅತ್ಯದ್ಭುತ ಪಾಂಡಿತ್ಯ ಹೊಂದಿ ಅನೇಕರನ್ನು ವಾದಗಳಲ್ಲಿ, ಸ್ಪರ್ಧೆಗಳಲ್ಲಿ ಸೋಲಿಸಿದರೂ ಸಹ ಎದುರಾಳಿಗಳಲ್ಲಿ ಬಹಳ ವಿನಯ ಹಾಗೂ ನಮ್ರತಾ ಭಾವದಿಂದ ನಡೆದುಕೊಂಡ ವ್ಯಕ್ತಿ ಆಚಾರ್ಯದೇಶಿಕರು. ತಾವು ಒಂದೇ ರಾತ್ರಿಯಲ್ಲಿ "ಪಾದುಕಾ ಸಹಸ್ರ" ಕಾವ್ಯವನ್ನು ಬರೆದು ಮುಗಿಸಿ, ತಮ್ಮ ಪ್ರತಿ ಸ್ಪರ್ಧಿಯು ಕೇವಲ ಮುನ್ನೂರು ಶ್ಲೋಕಗಳನ್ನು ಬರೆದುದ್ದಕ್ಕೆ ಪ್ರತಿಕ್ರಿಯೆ ವ್ಯಕ್ತಪಡಿಸಿ "ಒಂದು ಹಂದಿಯು ಒಂದೇ ಬಾರಿಗೆ ನಿಷ್ಪ್ರಯೋಜಕವಾದ ಅನೇಕ ಮರಿಗಳನ್ನು ಹೆರುತ್ತದೆ. ಆದರೆ ಒಂದು ಆನೆಯು ಅನೇಕ ವರ್ಷಗಳ ನಂತರ ರಾಜಯೋಗ್ಯವಾದ ಮರಿಯನ್ನು ನೀಡುತ್ತದೆ. ಅದರಂತೆ ಪ್ರತಿಸ್ಪರ್ಧಿಗಳ ಕಾವ್ಯವು ಗುಣದಲ್ಲಿ ಶ್ರೇಷ್ಠವಾದದ್ದು" ಎಂದು ಹೇಳಿ ತಮ್ಮ ವಿನಯವನ್ನು ಪ್ರಕಟಪಡಿಸಿದರು.

ಸ್ವಾಮಿ ದೇಶಿಕರು ಶ್ರೀವೈಷ್ಣವ ಸಂಪ್ರದಾಯಗಳಲ್ಲಿ ಒಂದಾದ ವಡಗಲೈ ಗುಂಪಿನ ಪ್ರವರ್ತಕರಾಗಿದ್ದಾಗ್ಯೂ ಸಹ, ತೆಂಗಲೈ ಸಂಪ್ರದಾಯವನ್ನು ಮಾನ್ಯ ಮಾಡಿ, ಪಿಳ್ಳೈ ಲೋಕಾಚಾರ್ಯರ ಅನೇಕ ಕೃತಿಗಳ ವಾಕ್ಯಗಳನ್ನು ತಮ್ಮ ಕೃತಿಗಳಲ್ಲಿ ಪ್ರಮಾಣವಾಗಿ ಉದಾಹರಿಸಿದ್ದಾರೆ. ಇದರಿಂದ ಅವರ ವಿಶಾಲ ಮನೋಭಾವ ವ್ಯಕ್ತವಾಗುತ್ತದೆ.

ಶ್ರೀ ದೇಶಿಕರು ಶಾಂತಿ ಪ್ರಿಯರು. ತಮ್ಮ ಸಂಕೇತಾತ್ಮಕ ನಾಟಕವಾದ "ಸಂಕಲ್ಪ ಸೂರ್ಯೋದಯಂ"ದಲ್ಲಿ ಸಾಮಾನ್ಯವಾಗಿ ನಾಟಕಗಳಲ್ಲಿ ಉಪಯೋಗಿಸುವ ಶೃಂಗಾರ, ರೌದ್ರ, ವೀರ, ಕರುಣ ರಸಗಳನ್ನು ನಿರಾಕರಿಸಿ, ಕೇವಲ ಶಾಂತಿ ರಸದ ಪ್ರತಿಪಾದನೆಯೊಂದಿಗೆ ನಾಟಕವನ್ನು ರಚಿಸಿದ್ದಾರೆ. "ಶಾಂತಿಯೊಂದೇ ಮನುಜಕುಲದ ಕ್ಲೇಶವನ್ನು ನೀಗಬಲ್ಲದು. ಬೇರೆ ಎಲ್ಲವೂ ಪರಸ್ಪರ ದ್ವೇಷ, ಅಸೂಯೆಗಳನ್ನು ಉಂಟುಮಾಡುತ್ತವೆ" ಎಂದು ಹೇಳಿ ಜಗತ್ತಿಗೆ ಶಾಂತಿ ಮಂತ್ರವನ್ನು ಘೋಷಿಸಿದ್ದಾರೆ. ತಮ್ಮ "ಈಶೋಪನಿಷತ್ ಭಾಷ್ಯ"ದಲ್ಲಿ ತಮ್ಮನ್ನು "ವಿಶ್ವಮಿತ್ರ" ಎಂದು ಕರೆದುಕೊಂಡಿದ್ದಾರೆ. ಹೀಗೆ ಆಚಾರ್ಯರು ಲೋಕ ಬಂಧುವಾಗಿ ಲೋಕ ಕ್ಷೇಮಕ್ಕಾಗಿ ಅನವರತ ಪ್ರಾರ್ಥಿಸಿ ಬಾಳಿ ಬದುಕಿದವರು.

ಶ್ರೀಮತೇ ನಿಗಮಾಂತ ದೇಶಿಕಾಯ ನಮಃ



# ರಾಜಗೋಪುರಗಳು

---ಸಿ. ಗೋವಿಂದಾಚಾರ್.

ದೇಗುಲವಿಲ್ಲದ ಊರಿನಲ್ಲಿ ವಾಸಮಾಡಬೇಡ ಎಂಬ ಮಾತಿದೆ. ಪ್ರತಿ ಊರಿನಲ್ಲಿ ಒಂದಲ್ಲ ಒಂದು ದೇವಸ್ಥಾನ ಅಥವಾ ಕನಿಷ್ಠಪಕ್ಷ ರಕ್ಷಣೆಗಾಗಿ ಊರ ಹೊರಗೆ ಒಂದು ಆಂಜನೇಯ ಅಥವಾ ಮಾರಿ ಗುಡಿಯಾದರೂ ಇರುವುದು. ಶಾಂತಿಧಾಮಗಳೆಂದೆನಿಸಿಕೊಂಡ ದೇವಸ್ಥಾನಗಳು ಪ್ರಾಚೀನ ಪುರಾಣೇತಿಹಾಸಗಳನ್ನು ಜನರ ಮನಸ್ಸಿನಲ್ಲಿ ಜೀವಂತವಾಗಿ ಉಳಿಸುವ ಸ್ಥಾವರ ಕ್ಷೇತ್ರಗಳಾಗಿವೆ. ದ್ವಾಪರಯುಗದ ಅಂತ್ಯದಲ್ಲಿ ದೇವಸ್ಥಾನಗಳ ಹುಟ್ಟನ್ನು ಗುರುತಿಸಬಹುದು. ಕಲಿಯುಗದ ಆದಿಭಾಗದಲ್ಲಿ ಮೂರ್ತಿ ಪೂಜೆ ಮತ ಧರ್ಮಗಳ ಹುಟ್ಟು, ಭಕ್ತಿ ಚಳುವಳಿ - ಮುಂತಾದ ಕಾರಣಗಳಿಂದ ದೇವಸ್ಥಾನಗಳ ನಿರ್ಮಾಣ, ಚಿಂತನೆ ಪ್ರಬಲವಾಯಿತು. ಈ ಚಿಂತನೆಯಲ್ಲಿ ಅರ್ಚಕ ವರ್ಗದವರು ಹಾಗೂ ಶಿಲ್ಪಿ - ಸ್ಥಪತಿಗಳು ಒಂದು ನಿರ್ಧಾರಕ್ಕೆ ಬರುತ್ತಿದ್ದರು. ಆಗಮ ಶಾಸ್ತ್ರ, ಶಿಲ್ಪ ಹಾಗೂ ವಾಸ್ತು ಶಾಸ್ತ್ರಗಳು ದೇವಸ್ಥಾನಗಳ ಹುಟ್ಟು ಮತ್ತು ರಚನೆಗೆ ಮೂಲಾಧಾರ ಗ್ರಂಥಗಳಾದುವು. ವಾಸ್ತು ವಿದ್ಯೆಯಲ್ಲಿ ಗುಡಿ ವಿಚಾರ ಮಾತ್ರವಲ್ಲದೆ ಎಲ್ಲ ರೀತಿಯ ಕಟ್ಟಡಗಳ ರಚನೆಯ ವಿಚಾರವಿದೆ. ಅಧಿಷ್ಠಾನ (ಪಾಯ) ಪಾದ, ಪ್ರಸ್ತರ, ಗ್ರೀವ, ಶಿಖರ ಮತ್ತು ಸ್ತೂಪಿ - ಇವು ದೇವಸ್ಥಾನದ ಅಂಗಗಳು. ಅಂದರೆ ಇವುಗಳಿಗೂ ಮನುಷ್ಯನಂತೆ ವ್ಯಕ್ತಿತ್ವವಿದೆ. ಗರ್ಭಗುಡಿಯೇ ಶಿರಸ್ಸು, ಗೋಪುರವೇ ಪಾದಗಳು, ಮಂಡಿಯೇ ಬಲಿಪೀಠ ಹಾಗೂ ಇತರ ಭಾಗಗಳು ವಾಸ್ತುಪುರುಷನ ಅವಯವಗಳು ಎಂಬ ದೇವಸ್ಥಾನದ ರಚನಾಕ್ರಮವು ಸಾಂಕೇತಿಕವಾಗಿವೆ. ಆಗಮ ಶಾಸ್ತ್ರೋಕ್ತ ಲಕ್ಷಣಗಳಾದ ಗರ್ಭಗುಡಿ, ವಿಮಾನ, ಮುಖಮಂಟಪ, ಬಲಿಪೀಠ ಧ್ವಜಸ್ತಂಭ ಪ್ರಾಕಾರಗೋಪುರ - ಮುಂತಾದ ಭಾಗಗಳಿಂದ ದೇವಸ್ಥಾನಕ್ಕೆ ಪರಿಪೂರ್ಣತ್ವ ಬರುವುದು.

ಕಲಾಪೂರ್ಣವಾಗಿ ಹಲವಾರು ಅಂತಸ್ತುಗಳುಳ್ಳ ಆಕಾಶದೆತ್ತರವಾಗಿ ನಿಂತಿರುವ ರಾಜಗೋಪುರ ದೇವಸ್ಥಾನದ ಅತ್ಯಂತ ಆಕರ್ಷಕವಾದ ಭಾಗ. ಹೊರಪ್ರಾಕಾರದಲ್ಲಿ ಬೃಹತ್ ದ್ವಾರಗಳಿಂದ ನಿರ್ಮಿತವಾಗಿರುತ್ತೆ. ರಾಯಗೋಪುರ, ದ್ವಾರಶೋಭ ಪಡಿಪುರ ಮುಂತಾದ ಹೆಸರುಗಳಿವೆ. ಪಾಶ್ಚಾತ್ಯರ ಪ್ರಕಾರ "Gate way to see God" ದೇವಸ್ಥಾನಗಳ ನಿರ್ಮಾಣದಲ್ಲಿ ಪಲ್ಲವರು ಮೊದಲಿಗರು. ೫-೬ .ನೆ ಶತಮಾನದ ಸುಮಾರಿಗೆ ಗುಹಾಶಿಲ್ಪ ದೇವಸ್ಥಾನಗಳು ಮೂಡಿಬಂದುವು. ಎಲ್ಲೋರಾದ ಕೈಲಾಸನಾಥದೇವಾಲಯ ಒಳ್ಳೆ ನಿದರ್ಶನ. ಏಕಶಿಲಾದೇವಸ್ಥಾನಗಳಲ್ಲಿ ಗೋಪುರ ಪ್ರಾಧಾನ್ಯತೆ ಇಲ್ಲ. ಅಂದರೆ ಪುರಾತನ ಕಾಲದ ದೇವಸ್ಥಾನಗಳಲ್ಲಿ ಗೋಪುರಗಳು ಎದ್ದು ಕಾಣುವ ಭಾಗವಲ್ಲ. ಅಂದು ದೇವಸ್ಥಾನದ ಕಟ್ಟಡಗಳು ಬಹಳ ಸಾಮಾನ್ಯವಾಗಿದ್ದು ಒಂದು ಗರ್ಭಗುಡಿ ಮಾತ್ರ ಇರುತ್ತಿತ್ತು. ಕ್ರಮೇಣ ಅದಕ್ಕೆ ತಕ್ಕಂಥಾ ಪ್ರಕಾರ ಹಾಗೂ ಒಂದಿಷ್ಟಿನ ಗೋಪುರ ನಿರ್ಮಾಣ ಅಲ್ಲಲ್ಲಿ ಕಂಡುಬಂದುವು. ಮಹಾಬಲಿಪುರಂನ ರಥರೀತಿಯ ದೇವಸ್ಥಾನಗಳಲ್ಲಿ ವಿಮಾನವೇ ಗೋಪುರ. ಉತ್ತರ ಭಾರತದಲ್ಲಿ ಇದನ್ನು 'ಪ್ರಸಾದ, ಪ್ರಸಾದ' ಎಂದು ಕರೆಯುವರು. ವಿಮಾನವನ್ನೇ ಗೋಪುರವಾಗಿ ಪರಿಗಣಿಸುವ ಎರಡು ಪ್ರಧಾನ ನಿದರ್ಶನಗಳು :--

೧. ೬೬ ಮೀಟರ್ ಎತ್ತರದ ತಂಜಾವೂರಿನ ಬೃಹದೀಶ್ವರ ದೇವಾಲಯ.

೨. ಪೂರಿ ಜಗನ್ನಾಥ ಮಂದಿರ ಹಾಗೂ ಲಿಂಗರಾಜ ದೇವಾಲಯ.

ವಿಮಾನ, ಆಯತನ, ಪದ್ಮ ಮಂದಿರ - ಇವು ಮೂಲಸನಿಧಿಯನ್ನು ಸೂಚಿಸುವ ಪದಗಳು.



ಶಿಲ್ಪಶಾಸ್ತ್ರದ ಪ್ರಕಾರ ಭಾರತದೇವಸ್ಥಾನಗಳನ್ನು a) ನಾಗರ, b) ವೇಸರ, c) ದ್ರಾವಿಡ ಎಂದು ಮೂರು ಶೈಲಿಗಳಲ್ಲಿ ಗುರುತಿಸಬಹುದು. ಔತ್ತರ ದೇವಸ್ಥಾನಗಳಲ್ಲಿ ರಾಜಗೋಪುರವಿರುವುದಿಲ್ಲ. ಇವುಗಳ ಶೈಲಿಯನ್ನು 'ಚೈತ್ಯ' ಅಥವ ಗಜಪೃಷ್ಠಾಕಾರ ಎಂದು ಕರೆಯುವರು. 'ಭುವನ ಪ್ರದೀಪ' ಗ್ರಂಥದ ಪ್ರಕಾರ ಪೂರಿ ಜಗನ್ನಾಥ, ಕೊನಾರ್ಕ್ ದೇವಸ್ಥಾನಗಳು ನಾಗರ + ರೇಖಾನಿಗುಣ್ ಎಂಬ ಸಂಮಿಶ್ರ ಶೈಲಿಯಲ್ಲಿದೆ. ಈ ನಾಗರ ವಿಮಾನವು ರಾಜಗೋಪುರದಂತೆಯೇ ಕಾಣುವುದು. ಈ ವಿಮಾನ ಗೋಪುರವು ಉದ್ದಕ್ಕೆ ಒಂದೇ ಗೆರೆಯಂತೆ ಕಾಣುವುದರಿಂದ 'ರೇಖ' ಎಂದು ಹೆಸರು. ತಂಜಾವೂರಿನ ರಾಜಗೋಪುರವು ವಿಮಾನಗೋಪುರಕ್ಕಿಂತ ತುಂಬಾ ಕಿರಿದಾಗಿರುತ್ತೆ. ರಾಜಾಸ್ಥಾನದ ನಾಥದ್ವಾರವನ್ನು ಗಮನಿಸಿದರೆ ಯಾವುದೋ ಅರಮನೆ ಅಥವ ಠಾಕೂರ್ ಸಾಹೇಬನ ಬಂಗಲೆಯೋ ಎಂದು ಹೇಳಬಹುದು. ಇದಕ್ಕೆ 'ಮಂದಿರ್ ಹವೇಲಿ' ಎಂದು ಹೆಸರು. ದಕ್ಷಿಣದಂತೆ ಇಲ್ಲಿ ಪ್ರಾಕಾರ ಗೋಪುರಗಳು ಕಾಣಸಿಗದು. ದ್ರಾವಿಡ - ಹೊಯ್ಸಳ ಸಂಮಿಶ್ರಶೈಲಿಯ ಶೃಂಗೇರಿ ದೇವಸ್ಥಾನದಲ್ಲಿ ರಾಜಗೋಪುರದ ಪ್ರಾಧಾನ್ಯವಿಲ್ಲ.

ಎತ್ತರವಾದ ರಾಜಗೋಪುರಗಳ ಹುಟ್ಟನ್ನು ೧೧ನೆ ಶತಮಾನದ ಸುಮಾರಿಗೆ ಗುರುತಿಸಬಹುದು. ಕ್ಷತ್ರಿಯನು ಗುಡಿಗೋಪುರಗಳನ್ನು ನಿರ್ಮಿಸಿದರೆ ಭಗವಂತನ ಸಾರೂಪ್ಯವನ್ನು ಹೊಂದುವನು ಎಂದು ಆಗಮ ಶಾಸ್ತ್ರದ 'ಪ್ರತಿಷ್ಠಾಪ್ರಕರಣ'ದಲ್ಲಿ ಫಲಶ್ರುತಿ ಇದೆ. ಯಾವಕಾಲದಲ್ಲಿ ಯಾವ ಧರ್ಮ ಪ್ರಬಲವಾಗಿತ್ತು, ಯಾವುದಕ್ಕೆ ರಾಜಾಶ್ರಯ ಸಿಕ್ಕಿತ್ತು ಎಂಬ ಐತಿಹಾಸಿಕ ಪ್ರಶ್ನೆಗಳಿಗೆ ರಾಜಗೋಪುರಗಳು ಉತ್ತರ ನೀಡುವುವು. ಕಣ್ಣುಕೋರೈಸುವಂಥಾ ಗಗನ ಗೋಪುರಗಳ ಬಗ್ಗೆ ಅರಸರ ಗೀಳು ಹೆಚ್ಚಾಯಿತು. ಇವರುಗಳ ಮಧ್ಯೆ ಭಾರಿ ಸ್ಪರ್ಧೆ ಇದೆಯೇನೋ ಎನ್ನುವಷ್ಟರಮಟ್ಟಿಗೆ ಗೋಪುರ ನಿರ್ಮಾಣಕಾರ್ಯ ಬಿರುಸಿನಿಂದ ಸಾಗಿತು. ಜನರಿಂದ ಪ್ರಶಂಸೆಯೂ ಬಂತು. ಗುಡಿಗೊಂದು ಗೋಪುರದಿಂದ ಗುಡಿಯಲ್ಲೇ ಹಲವಾರ ಗೋಪುರಗಳಿರುವ ಪರಿಸ್ಥಿತಿ ಉಂಟಾಯಿತು. ೪ ದಿಕ್ಕುಗಳಲ್ಲಿಯೂ ಗೋಪುರಗಳಿರುವ ತಿರುವಣ್ಣಾಮಲೈ



ತಿರುಮಲೆ - ತಿರುಪತಿ ದೇವಸ್ಥಾನಗಳು

# ಅಭಿಷೇಕ ಸೇವೆಗಳು

ತಿರುಮಲೆ ತಿರುಪತಿ ದೇವಸ್ಥಾನಗಳ ಆಡಳಿತ ಪರಿಧಿಯ ಆರು ದೇವಾಲಯಗಳಲ್ಲಿ ವಾರಕ್ಕೆ ಒಮ್ಮೆ ನಡೆಯುವ ಅಭಿಷೇಕ ಸಮಯದಲ್ಲಿ ಭಕ್ತರು ಒಬ್ಬರಿಗೆ ೫ ರೂಪಾಯಿನಂತೆ ಶುಲ್ಕ ನೀಡಿ ಅಭಿಷೇಕ ದರ್ಶನ ಹೊಂದಬಹುದು. ವಿವಿಧೆಡೆಗಳಲ್ಲಿರುವ ಈ ದೇವಾಲಯಗಳೆಂದರೆ--

1. ಶ್ರೀ ವೇದನಾರಾಯಣಸ್ವಾಮಿ ಆಲಯ
--ನಾಗುಲಾಪುರಂ.

2. ಶ್ರೀ ಕಲ್ಯಾಣ ವೆಂಕಟೇಶ್ವರಸ್ವಾಮಿ ಆಲಯ
--ನಾರಾಯಣವನಂ.

3. ಶ್ರೀ ವೇಣುಗೋಪಾಲಸ್ವಾಮಿ ಆಲಯ
--ಕಾರ್ವೇಟಿನಗರ.

4. ಶ್ರೀ ಪ್ರಸನ್ನ ವೆಂಕಟೇಶ್ವರಸ್ವಾಮಿ ಆಲಯ
--ಅಪ್ಪಲಾಯಗುಂಟ.

5. ಶ್ರೀ ವೆಂಕಟೇಶ್ವರಸ್ವಾಮಿ ಆಲಯ
--ಶ್ರೀನಿವಾಸಮಂಗಾಪುರ.

6. ಆಲಯಸಮುದಾಯ --ಹೃಷೀಕೇಶ.

ಯಾತ್ರಿಕ ಭಕ್ತರು ಈ ಅವಕಾಶವನ್ನು ಉಪಯೋಗಿಸಿಕೊಂಡು ದೇವರ ಅನುಗ್ರಹಕ್ಕೆ ಪಾತ್ರರಾಗಬೇಕೆಂದು ಕೋರಲಾಗಿದೆ.

ತಿ. ತಿ. ದೇವಸ್ಥಾನಗಳು,
--ತಿರುಪತಿ.



ಮಧುರೈ ಚಿದಂಬರಂ, ಶ್ರೀರಂಗ ಮುಂತಾದ ಕ್ಷೇತ್ರಗಳು ಗೋಪುರದ ಗಾಂಭೀರ್ಯವನ್ನು ಸೂಚಿಸುವು. ಇವುಗಳ ನಿರ್ಮಾಣ ಕಾರ್ಯಪೂರ್ಣವಾಗುವುದಕ್ಕೆ ಶತಮಾನಗಳು ಕಳೆದುವು. ರಾಮೇಶ್ವರದ ರಾಜಗೋಪುರ ಕಟ್ಟಲು ೧೦೦ ವರ್ಷಗಳ ಕಾಲ ಹಿಡಿಯಿತು. ೧೩ ನೇ ಶತಮಾನದಲ್ಲಿ ಮಾರವರ್ಮನ್ ಸುಂದರ ಪಾಂಡ್ಯನ್ ಮಧುರೈನ ಪೂರ್ವ ಗೋಪುರವನ್ನೂ, ೧೪ ನೆ ಶತಮಾನದಲ್ಲಿ ಪರಾಕ್ರಮ ಪಾಂಡ್ಯನ್ ಪಶ್ಚಿಮ ಗೋಪುರವನ್ನೂ ಕಟ್ಟಿಸಿ ತಿರುಮಲ ನಾಯಕನ ಕಾಲದಲ್ಲಿ ಪೂರ್ಣವಾಗಿ ಅಸ್ತಿತ್ವಕ್ಕೆ ಬಂತು. ಕಾಳಹಸ್ತಿಯ ಪ್ರಧಾನ (ದಕ್ಷಿಣ) ಗೋಪುರವನ್ನು ೧೧ ನೆ ಶತಮಾನದಲ್ಲಿ ಕುಲೋತ್ತುಂಗ ಚೋಳನು, ಪೂರ್ವ - ಪಶ್ಚಿಮ ಗೋಪುರಗಳನ್ನು ೧೨ ನೆ ಶತಮಾನದಲ್ಲಿ ವೀರನರಸಿಂಹ ಯಾದವರಾಯ ಹಾಗೂ ಅವನ ವಂಶಜರು ಕಟ್ಟಿಸಿದರು. ಗೋಪುರಗಳ ಮಯವಾದ ಶ್ರೀರಂಗ ಕ್ಷೇತ್ರ ನಿರ್ಮಾಣದಲ್ಲಿ ಕಿಳಿಕಂಡ ಚೋಳ, ಜಟಾವರ್ಮ ಸುಂದರ ಪಾಂಡ್ಯ ರಾಮನಾಥ, ಕರಿಕಾಲ ಚೋಳ ಹಾಗೂ ವಿಜಯನಗರದರಸರು ಸೇವೆ ಸಲ್ಲಿಸಿರುತ್ತಾರೆ. ತಿರುವಣ್ಣಾಮಲೈನ ರಾಜಗೋಪುರವನ್ನು 'ಬಲ್ಲಾಳ ಗೋಪುರ' ಎಂದು ಕರೆಯುವರು.

ಚೋಳ ಮಂಡಲದ ದೇವಸ್ಥಾನಗಳು ಚೋಳರ ಕಾಲದ ಶಿಲ್ಪಕಲಾ ವೈಭವವನ್ನೂ, ರಚನಾಕ್ರಮವನ್ನೂ ತೋರಿಸುವುವು. ಚೋಳಪಾಂಡ್ಯರ ನಡುವೆ ಆಕಾಶದೆತ್ತರವಾದ ರಾಜಗೋಪುರದ ನಿರ್ಮಾಣದ ಬಗ್ಗೆ ತೀವ್ರಸ್ಪರ್ಧೆ ಇತ್ತು ಎನ್ನುವುದಕ್ಕೆ ಗಗನ ಮುಟ್ಟುವಂಥಾ ಶ್ರೀರಂಗಂ, ಮಧುರೈ, ತಿರುವಣ್ಣಾಮಲೈ, ಶ್ರೀವಿಲ್ಲಿಪುತ್ತೂರ್, ಕುಂಭಕೋಣ, ಕಂಚಿ ಏಕಾಂಬರೇಶ್ವರ, ರಾಮೇಶ್ವರ, ತಿರುಕ್ಕೊಯಿಲೂರ್, ಕಾಳಹಸ್ತಿ, ತಿರುವಾರೂರು ರಾಜಗೋಪುರಗಳು ಒಳ್ಳೆಯ ನಿದರ್ಶನಗಳಾಗಿವೆ. ಕರ್ಣಾಟಕದಲ್ಲಿ ಎತ್ತರವಾದ ರಾಜಗೋಪುರಗಳಿಲ್ಲವಿದ್ದರೂ, ಹಂಪೆ, ನಂಜನಗೂಡು, ಚಾಂಮುಡೇಶ್ವರಿ, ನಾಗಮಂಗಲ - ದೇವಸ್ಥಾನಗಳು ಉಲ್ಲೇಖಾರ್ಹ. ಶೀಬಿ, ಬಿಳಿಗಿರಿ ಮುಂತಾದುವಲ್ಲಿ ರಾಜಗೋಪುರಗಳಿಲ್ಲ. ಮಾಗಡಿಯಲ್ಲಿ ಪೂರ್ವ - ಪಶ್ಚಿಮ ದಿಕ್ಕು ಗಳೆರಡರಲ್ಲೂ ರಾಜಗೋಪುರಗಳಿವೆ. ಆಂಧ್ರದಲ್ಲಿ ಸಿಂಹಾಚಲ, ಮಂಗಳಗಿರಿ, ಗೋವಿಂದರಾಜಸ್ವಾಮಿ ದೇವಸ್ಥಾನಗಳನ್ನು ಹೆಸರಿಸಬಹುದು. ಕೇರಳಾವ ಟ್ರಿಚೂರಿನ ವಡಕ್ಕುನಾಥ ದೇವಸ್ಥಾನದಲ್ಲಿ ನಾಲ್ಕೂ ಕಡೆಗಳಲ್ಲಿ ಗೋಪುರಗಳಿವೆ. ಆದರೆ ವಿಮಾನಭಾಗವೇ (ಶ್ರೀ ಕೋಯಿಲ್) ಎದ್ದು ಕಾಣುವುದು. ಅನಂತ ಶಯನ ದೇವಸ್ಥಾನವು ಚೋಳ ಹಾಗೂ 'ತಂತ್ರ ಸಮುಚ್ಚಯ' ಆಧಾರಿತವಾದ ಚೇರ ಸಂಮಿಶ್ರಶೈಲಿಯಲ್ಲಿದೆ. ಪೂರ್ವದಿಕ್ಕಿನಲ್ಲಿರುವ ರಾಜಗೋಪು ಅಗಲವಾಗಿದೆ. ಉತ್ತರದ ಗೋಪುರವನ್ನು 'ಕಿಳ್ಳಿಸಲ್' ಎಂದು ಕರೆಯುವರು. ಹೆಂಚಿನ ಮನೆಯಂ ಕಾಣುವ ವಿಮಾನವು 'ಗೇಬಲ್' ಚಾವಣಿಯಿಂ ಕೂಡಿರುತ್ತೆ. ಹೀಗೆ ಇಡಿ ದಕ್ಷಿಣ ದೇಶಗಳಲ್ಲಿ ಗೋ ರಗಳು ವಿಶಿಷ್ಟಸ್ಥಾನವನ್ನು ಗಳಿಸಿ ಇತಿಹಾಸದ ಶಾಶ್ವತವಾಗಿರುವುವು. ಇಂದಿಗೂ ಶ್ರೀವಿಲ್ಲಿಪುತ್ತೂ ರಾಜಗೋಪುರದ ಮುದ್ರೆ ತಮಿಳುನಾಡು ಸರ್ಕಾರದ ಅಧಿಕೃತ ಲಾಂಛನವಾಗಿರುತ್ತೆ.

ಗೋಪುರ ನಿರ್ಮಾಣ ಹಾಗೂ ಗೋಪುರಗಳ ಏನಿರಬೇಕು ಎಂಬುದು ಆಗಮ ಶಾಸ್ತ್ರದಲ್ಲಿ ಹಾಗ ವಾಸ್ತುವಿದ್ಯೆಯ ಪ್ರಥಮಭಾಗವಾದ ವಾಸ್ತುಶಾ ದಲ್ಲಿ ಬರುವುದು. ಇದರಲ್ಲಿ ದೊರಕುವ ಶಾಸ್ತ್ರಗ್ರಂಥಗಳು - ವೈಖಾನಸಾಗಮ, ಮಯಮತ, ಬೃಹತ್ ಸಂಹಿತೆ, ಕಾಶ್ಯಪಸಂಹಿತೆ, ಶಿಲ್ಪರತ್ನ, ಮನುಷ್ಯಾಲಯ ಚಂದ್ರಿಕೆ, ಈಶಾನ ಶಿವಗುರುಪದ್ಧತಿ ಇತ್ಯಾದಿ. ಮತ್ಸ್ಯ ಪುರಾಣದಲ್ಲೂ ವಾಸ್ತುಶಿಲ್ಪ ನಿರೂಪಣೆ ಇದೆ. ಗೋಪುರದ ಮೂಲ ಮಾದ ಒಂದೆ ಆಗಿದ್ದರೂ, ಕುಳಿತಿರುವ ಗಿಳಿಯಂತೆ, ಗಂ ಯಂತೆ ಸಮತಲವಾದ ಪಿರಮಿಡ್ ಆಕಾರದಂ ಕಾಣುವುದು. ಶ್ರೀರಂಗದ ಪೂರ್ವದಿಕ್ಕಿನ ಚ ರ್ಮುಖ ಗೋಪುರ ತುಂಬಾ ವಿರಳ. ಸಾಮಾ ನ್ಯವಾಗಿ ಗೋಪುರದ ಮಹಾದ್ವಾರ ಕಲ್ಲಿನಿಂದಲ ಮೇಲ್ಭಾಗಗಳು ಇಟ್ಟಿಗೆಯಿಂದಲೂ ನಿರ್ಮಿತವಾ ಗಿರುತ್ತೆ. ತಿರುಕ್ಕೋಯಿಲೂರ್ ರಾಜಗೋಪುರ ಸುಮಾರು ೬ ಅಡಿ ದಪ್ಪವಾದ ಪುಟದ ಗೋ ಯಿಂದ ಮಹಾದ್ವಾರವೂ, ಇದರ ಮೇಲೆ ೭ ಅಂ ಸ್ಥಿನ ಗೋಪುರವು 'ಕಪಿ' ಇಟ್ಟಿಗೆಗಳಿಂದ ನಿರ್ಮಿತವಾ ಗಿರುತ್ತೆ. ಗೋಪುರದ ಅಂತಸ್ತುಗಳನ್ನು 'ಊರ್ಧ್ವ ಲೋಕಗಳು' ಎಂದು ಭಾವಿಸಲಾಗಿದೆ. ಇವು ಳನ್ನು 'ಮಾಲಿಕಾ' ಎಂದೂ ಕರೆಯುವರು. ನಾ (ಮೂಗಿನಂತೆ ಕಾಣುವುದರಿಂದ ಈ ಹೆಸರು) ಅ ನಾಶಿ, ಮಹಾನಾಶಿ ಹಾಗೂ ಪ್ರಭಾವಳಿ ರಚನೆ ಳಿಂದ ಈ ಮಾಲಿಕೆ ರಚಿತವಾಗಿರುತ್ತೆ. ಗೋಪು ನಿರ್ಮಾಣದಲ್ಲಿ ಭಾರಿಕಲ್ಲು ಕಂಭಗಳನ್ನು ಚಪ್ಪಡಿ ಳನ್ನು ಅಷ್ಟು ಎತ್ತರ ಸಾಗಿಸಿರುವುದು ಆಶ್ಚರ್ಯವ ಸರಿ. ಇಂದಿನ ತಂತ್ರಜ್ಞರಿಗೆ ಸವಾಲಾಗಿರುವುದಲ್ಲ ಅಂದಿನ ಶಿಲ್ಪಿಗಳು ಅದೆಷ್ಟು ಗಟ್ಟಿಗರು ಎಂದು ತಿ ಯುವುದು. ಇಂದಿನ ಸಿಮೆಂಟ್‌ಗಿಂತ ಅಂದಿ ಕೆಮ್ಮಣ್ಣು, ಮರಳು, ಸುಣ್ಣ, ಗೋಂದು, ಬೆಲ್ಲ ಮಿಶ್ರ ವಾದ ಗಾರೆ ಅದೆಷ್ಟು ಗಟ್ಟಿ ಎಂಬುದೂ ತಿಳಿಯು

ಗೋಪುರಗಳಲ್ಲಿ ಕಾಣುವ ವಿಗ್ರಹಗಳ ವಿವ ಣೆಯು 'ವಿಗ್ರಹ' ಮತ್ತು ಆಯಾದಿ ಗ್ರಂಥದ 'ಶಿಲ್ಪ

ಸ್ಥುಲ್' ಅಧ್ಯಾಯದಲ್ಲಿ ಹಾಗೂ 'ಶ್ರೀತತ್ವನಿಧಿ' ಗ್ರಂಥದಲ್ಲಿವೆ. ಮೂಲದೇವರು ಯಾವುದು ಎಂಬುದರ ಮೇಲೆ ರಾಜಗೋಪುರಗಳಲ್ಲಿ ದೇವಕೋಷ್ಠ ನಿರ್ಮಿತವಾಗಿರುತ್ತೆ. ಪ್ರಥಮವಾಗಿ ದ್ವಾರಪಾಲಕಮೂರ್ತಿಗಳು ಗೋಚರವಾಗುವುದು. ಕೆಲವು ಪಲ್ಲವ - ರಾಷ್ಟ್ರಕೂಟ ಕ್ಷೇತ್ರಗಳಲ್ಲಿರುವ ಅಡ್ಡಗಾಲಿನ ದ್ವಾರಪಾಲಕ ಮೂರ್ತಿಗಳು ಪ್ರಾಚೀನತೆಯನ್ನು ಸೂಚಿಸುವುದು. ಮೇಲಂತಸ್ತುಗಳಲ್ಲಿ ನಾಟ್ಯಶಾಸ್ತ್ರ ಸೂಚಕವಾದ ಕಿನ್ನರ ಕಿಂಪುರುಷ ಗಂಧರ್ವ ಮೂರ್ತಿಗಳು, ಗೋಪುರವನ್ನು ಎತ್ತಿಹಿಡಿದಿರುವ 'ಗೋಪುರ ತಾಂಗಿ' ಗಳ (ಸ್ತ್ರೀ - ಪುರುಷ ರಿಬ್ಬರೂ) ವಿಗ್ರಹಗಳನ್ನು ಎದ್ದು ಕಾಣುವ ರೀತಿಯಲ್ಲಿ ನಿರ್ಮಿಸಿರುತ್ತಾರೆ. ವಿಷ್ಣುಕ್ಷೇತ್ರದ ರಾಜಗೋಪುರಗಳಲ್ಲಿ ಒಂದು ಕಡೆ ಶ್ರೀಧರ, ವರಾಹ, ನೃಸಿಂಹ ದಿಗ್ ಮೂರ್ತಿಗಳು, ಇನ್ನೊಂದು ಕಡೆ ಸತ್ಯ, ಅಚ್ಯುತ, ಅನಿರುದ್ಧ, ನಾರಾಯಣ, ವಿಷ್ಣು ನರನಾರಾಯಣಮೂರ್ತಿಗಳಿರುತ್ತವೆ. ವೈಖಾನಸಾಗಮದ ಪ್ರಕಾರ ಇವೇ ನವಮೂರ್ತಿಗಳು. ರಾಮಾಯಣ, ಮಹಾಭಾರತ, ಭಾಗವತದಿಂದ ಕೆಲವು ಆಯ್ದಭಾಗಗಳು (ಗಜೇಂದ್ರಮೋಕ್ಷಧ್ರುವ ಇತ್ಯಾದಿ) ಅನಂತ, ಗರುಡ, ವಿಶ್ವಕ್ಸೇನ, ನಾರದ ಹನುಮಂತ ಪ್ರಹ್ಲಾದ ಮುಂತಾದ ದೇವಕೋಷ್ಠಮೂರ್ತಿಗಳು, ಆಳ್ವಾರಾಚಾರ್ಯರ ವಿಗ್ರಹಗಳು ಇರುತ್ತವೆ. ಬೇಲೂರು ಕುಂಭಕೋಣ, ಗೋವಿಂದರಾಜಸ್ವಾಮಿ ಮುಂತಾದ ರಾಜಗೋಪುರಗಳಲ್ಲಿ ಕಾಮಶಾಸ್ತ್ರದಲ್ಲಿ ಬರುವ ವಿವಿಧ ಮಿಥುನ ಶಿಲ್ಪಗಳನ್ನು ಕಂಡೂಕಾಣದೆ ನಿರ್ಮಿಸಿರುತ್ತಾರೆ. 'ಇದು ದೃಷ್ಟಿ ಪರಿಹಾರಕ್ಕಾಗಿ' ಎಂದು ಸ್ಥಪತಿಗಳು ಹೇಳುವರು. ಶಿವಾಲಯಗಳ ರಾಜಗೋಪುರಗಳಲ್ಲಿ ಅಗ್ನಿ, ಅಗಸ್ತ್ಯ, ದೇವೇಂದ್ರ, ಸುಬ್ರಹ್ಮಣ್ಯ, ನಾಗರಾಜ ಮುಂತಾದ ದೇವಕೋಷ್ಠಗಳಿರುವುವು. ಮಯಮತ ಗ್ರಂಥದ ಪ್ರಕಾರ ಗರ್ಭಗುಡಿಯಲ್ಲಿ ಬರಿ ಲಿಂಗಪೂಜೆ ವಿಧಿತವಾಗಿರುವುದರಿಂದ ಗೋಪುರದ ದಕ್ಷಿಣಕ್ಕೆದಕ್ಷಿಣಾಮೂರ್ತಿಯೂ ಉತ್ತರಕ್ಕೆ ಬ್ರಹ್ಮಸರಸ್ವತಿಯರು, ಪಶ್ಚಿಮಕ್ಕೆ ಲಕ್ಷ್ಮೀನಾರಾಯಣರು, ಪೂರ್ವಕ್ಕೆ ದ್ವಾರಪಾಲಕರು ನಂದಿಕೇಶ್ವರ ಮೂರ್ತಿಗಳು ವಿಧಿತವಾಗಿರುವುವು. ಗೋಪುರದ ಮಿಕ್ಕ ಕಡೆಗಳಲ್ಲಿ ಒಳಭಾಗವಲ್ಲಿ ಗಂಗಾಧರ, ಚಂದ್ರಶೇಖರ, ವೀರಭದ್ರ, ಸದಾಶಿವ, ಋಷಭವಾಹನ ಏಕಪಾದ ಮೂರ್ತಿ, ಭಿಕ್ಷಾಟನಮೂರ್ತಿ, ನಟರಾಜ, ಅರ್ಧನಾರೀಶ್ವರ ಹರಿಹರ ಮುಂತಾದ ೧೮ ಶಿವಲೀಲಾಮೂರ್ತಿಗಳು (ಕಾಶ್ಯಪ ಸಂಹಿತೆ ಪ್ರಕಾರ) ಶಿವಪಂಚಾಯತನ ಹಾಗೂ ಶಿವಪುರಾಣದಿಂದ ಭಕ್ತ ಮಾರ್ಕಂಡೇಯ ಮುಂತಾದ ಆಯ್ದಭಾಗಗಳು ಇರುತ್ತವೆ. ಹೀಗೆಯೇ ಸುಬ್ರಹ್ಮಣ್ಯ ಶಕ್ತಿದೇವತೆಗಳ ದೇವಸ್ಥಾನಗಳಲ್ಲಿ ಶಾಸ್ತ್ರೋಕ್ತವಾದ ದೇವಕೋಷ್ಠವನ್ನು ನಿರ್ಮಿಸಿರುತ್ತಾರೆ. ಮುರುಘ ದೇವಸ್ಥಾನ ರಾಜಗೋಪುರದಲ್ಲಿ 'ವೇಲ್' ಆಯುಧವನ್ನು ದೊಡ್ಡದಾಗಿ ಕಾಣುವರೀತಿ ದೀಪಾಲಂಕಾರ ಸಮೇತ ನಿರ್ಮಿಸಿರುತ್ತಾರೆ. ಕೆಲವು ರಾಜಗೋಪುರಗಳಲ್ಲಿ ಸಪ್ತಮಾತೃಕೆಯರನ್ನು ಅಷ್ಟಲಕ್ಷ್ಮಿಯರನ್ನು ತೋರಣದಂತೆ ನಿರ್ಮಿಸಿರುವರು. ವೃದ್ಧಾಚಲಂ, ಚಿದಂಬರಂ, ತಿರುವಣ್ಣಾಮಲೈ ರಾಜಗೋಪುರಗಳಲ್ಲಿ ನಾಟ್ಯಶಾಸ್ತ್ರದ ೧೦೮ ಭಂಗಿಗಳನ್ನು ಸೂಚಿಸುವ ಕೃತಿಗಳಿರುತ್ತವೆ. ಚಿದಂಬರಂ ತಿರುವಣ್ಣಾಮಲೈಯಲ್ಲಿ ಅಲ್ಲಲ್ಲಿ ಹೆಸರುಗಳನ್ನೂ ನಿರ್ದೇಶಿಸಿರುತ್ತಾರೆ. ಸರ್ವಧರ್ಮ ಸಮನ್ವಯ ಬೆಳೆಸಲು, ಬೆಂಗಳೂರು ತ್ಯಾಗರಾಜನಗರ ಬಡಾವಣೆಯ ಗಣೇಶಮಂದಿರ, ಮೈಸೂರು ರಸ್ತೆಯಲ್ಲಿರುವ ಗಾಳಿ ಆಂಜನೇಯಸ್ವಾಮಿ ಹಾಗೂ ಬನಶಂಕರಿ ಬಡಾವಣೆಯಲ್ಲಿರುವ ದೇವಗಿರಿ ವರಪ್ರದ ವೆಂಕಟೇಶ ದೇವಸ್ಥಾನಗಳಲ್ಲಿ (೧೦೮ ಅಡಿ ಎತ್ತರದ ರಾಜಗೋಪುರ) ವಿವಿಧ ಮತಗಳನ್ನು ಪ್ರತಿಬಿಂಬಿಸುವ ಶಿಲ್ಪಗಳಿವೆ.

ಗೋಪುರದ ಒಳಭಾಗದ ಎರಡೂ ಕಡೆಗಳಲ್ಲಿ (ಕರ್ಣ) ಲತಾಕನ್ನಿಕೆಯರು ಹಾಗೂ ಇತರಸ್ಥಳಗಳಲ್ಲಿ ಪಶುಪಕ್ಷಿಗಳು, ಕಲಾಕೌಶಲ್ಯವನ್ನು ತೋರುವ ಸುಂದರ ಪುತ್ಥಳಿಗಳು ಇನ್ನೂ ವೈವಿಧ್ಯಮಯವಾದ ಮೂರ್ತಿಗಳನ್ನು ಆಕರ್ಷಕ ಭಂಗಿಯಲ್ಲಿ ನಿರ್ಮಿಸಿರುತ್ತಾರೆ. ದೇವಸ್ಥಾನಗಳು ಲಲಿತ ಕಲೆಯ ತವರೂರು ಎನ್ನುವುದಕ್ಕೆ ಇವೆಲ್ಲಾ ಸಾಕ್ಷಿಭೂತವಾಗಿವೆ. ಗೋಪುರದ ತುದಿಯಲ್ಲಿ ಎರಡೂ ಪಕ್ಕಗಳಲ್ಲಿ ೧) ಭಯಾನಕವ್ಯಾಳಿ ಅಥವ ೨) ಗೋವಿನ ಎರಡು ಕೊಂಬುಗಳಂತೆ ನಿರ್ಮಿಸಿರುತ್ತಾರೆ. ಇವುಗಳ ಮಧ್ಯೆ ೧ರಿಂದ ೧೩ರ ವರೆಗೆ ಕಲಶಗಳಿರುತ್ತೆ. ಅಂತಸ್ತುಗಳ ಸಂಖ್ಯೆಗೂ ಕಲಶಗಳ ಸಂಖ್ಯೆಗೂ ಸಾಮ್ಯವಿದೆ.

ದೇವಸ್ಥಾನಗಳು ಆಧ್ಯಾತ್ಮಿಕ ಪೋಷಣೆ ನೀಡುವಲ್ಲಿ ಉತ್ತಮ ಸಾಧನಗಳಾಗಿವೆ. ಎಲ್ಲಿ ದೇವನುಂಟೋ ಎಲ್ಲಿ ಜೀವನುಂಟೋ ಅಲ್ಲಿ ಜೀವದೇವರ ಸಂಗಮಸ್ಥಾನವಾದ ದೇಗುಲವಿರುವುದು. ದುಷ್ಯಂತನಿಗೆ ಉಂಗುರವು ಸಹಾಯ ಮಾಡಿದಂತೆ ದೈವವನ್ನು ಮರೆತವರಿಗೆ ಜ್ಞಾಪಕ ಪಡಿಸುವ ಈ ರಾಜಗೋಪುರಗಳು ಆಧ್ಯಾತ್ಮಿಕ ವಿಚಾರದ ಪರಿಪೋಷಣೆಯ ಸಾಧನವಾಗಿವೆ. ಸಂತ ಮಹನೀಯರುಗಳಾದ ಆಳ್ವಾರುಗಳು ತಾವುವಾಸಮಾಡುವ ಸ್ಥಳದಿಂದಲೇ ಪ್ರಾತಃಕಾಲ ಎದ್ದಾಗ ಮೊದಲ್ನೋಟದಲ್ಲೇ ರಾಜಗೋಪುರ ಕಾಣಬೇಕೆಂದು ಹಂಬಲಿಸುತ್ತಿದ್ದರು. ಕುತಂತ್ರಿಗಳಿಂದ ಪಾರಾದ ರಾಮಾನುಜರು ಒಂದು ಕಡೆ ಮಲಗಿ ಎದ್ದಾಗ ಪ್ರಥಮವಾಗಿ ಕಂಡದ್ದು ಕಂಚಿ ಪೆರುಮಾಳ್ ಕೋಯಿಲಿನ ಪುಣ್ಯಕೋಟಿ ವಿಮಾನ ಗೋಪುರ.

"ಸುಭಗಶ್ಚಿಸೌ ತ್ರಿಕೂಟೋ
ಗಿರಿ ರಾಜೋಪಮೋ ಗಿರಿಃ
ಯಸ್ಮಿನ್ ವಸತಿ ಕಾಕುತ್ಸ
ಕುಬೇರ ಇವನಂದನೆ"

ಭಗವತ್ಸಾನಿಧ್ಯವಿರುವ ಆಲಯ ಗೋಪುರವನ್ನು ದೂರದಿಂದಲೇ ನೋಡಿ ನಮಿಸಿದರೂ ಸತ್ವಗುಣ ವೃದ್ಧಿಯಾಗುವುದೆಂದು ವಾಲ್ಮೀಕಿ ಮಹರ್ಷಿಗಳು ಹೇಳಿರುವರು. ಕೆಂಪು ಕಲ್ಲು ಸಕ್ಕರೆಯಂತೆ ಕಾಣುವ ಸಪ್ತಗಿರಿಯನ್ನು ದೂರದಿಂದಲೆ ನಮಿಸಿದರೂ ಸಾಕು ಫಲಕಾರಿ ಎಂಬ ಅಭಿಪ್ರಾಯವೂ ಇದೆ. ರಾಮೇಶ್ವರದ ರಾಜಗೋಪುರ ಲಂಕೆಗೆ ಕಾಣಬೇಕೆಂಬ ಉದ್ದೇಶದಿಂದ ಲಂಕಾರಾಜಕುಮಾರರು ೧೦೦ ಅಡಿ ಎತ್ತರದ ಗೋಪುರವನ್ನು ಕಟ್ಟಿಸಿದರು. ಊರಿಗೆಲ್ಲಾ ದೇವಸ್ಥಾನ ಎದ್ದು ಕಾಣುವಂತೆ ಮಾಡುವುದು ಹಾಗೂ ರಾಜಗೋಪುರದಿಂದ ಇಡಿ ಊರಿನ ಪಕ್ಷಿನೋಟ ದೊರಕುವುದು ದೇವಸ್ಥಾನ ನಿರ್ಮಾಣದ ಲಕ್ಷಣವೇ ಆಯಿತು. ಈ ಅಂಶವನ್ನು ಪರಾಶರಭಟ್ಟರು ಗರುಡನೇ ಶ್ರೀರಂಗದಲ್ಲಿ ಗೋಪುರ ರೂಪದಲ್ಲಿ ನಿಂತು ಕಾಯುತ್ತಿರುವನು ಎಂದು ರಂಗರಾಜಸ್ತವದಲ್ಲಿ (ಪೂರ್ವಶತಕ ೩೪) ಹೇಳಿರುತ್ತಾರೆ.

"ಶ್ರೀರಂಗಂ ದಿವ್ಯ ಭವನಂ
ಭುವಿಗೋಪುರಾಣಾಂ
ಪ್ರಾಕಾರಿತೇನ ನಿಕರೇಣ ಗರುತ್ಮದೇವ"

ನಗರ, ಗ್ರಾಮ ಹಾಗೂ ಅಗ್ರಹಾರಗಳ ಸರ್ವತೋಮುಖ ಅಭಿವೃದ್ಧಿಯಲ್ಲಿ ದೇವಸ್ಥಾನಗಳ ಪಾತ್ರ ಅಪಾರವಾದುದು. ಉನ್ನತ ಗೋಪುರಗಳುಳ್ಳ ದೇವಸ್ಥಾನಗಳು ಇಡೀ ಊರನ್ನೇ ಆಕ್ರಮಿಸಿಕೊಂಡಿರುವುದನ್ನು 'ಆಲಯಾಧೀನಗ್ರಾಮ' ಎಂದು ಕರೆಯುವರು. 'ತಿರುಚ್ಚಿಕೋಟೆ ಶ್ರೀರಂಗಪೇಟೆ' ಇದಕ್ಕೆ ಒಳ್ಳೆ ನಿದರ್ಶನ. ತಿರುಪತಿಯೂ 'ಆಲಯಾಧೀನ ಗ್ರಾಮ' ಲೆಕ್ಕವೇ. ಮೀನಾಕ್ಷಿ ದೇವಾಲಯವನ್ನು ಮಧ್ಯೆ ಇರಿಸಿಕೊಂಡೇ ಮಧುರೈ ನಗರ ನಿರ್ಮಿತವಾಗಿದೆ. ದೇವಸ್ಥಾನಗಳು ಸಾಮಾನ್ಯವಾಗಿ ಪೂರ್ವಾಭಿಮುಖವಾಗಿರುವುವು. ಆದರೆ ಶ್ರೀರಂಗ ವಿಮಾನ, ರಾಜಗೋಪುರ ದಕ್ಷಿಣ ದಿಕ್ಕಿಗೆ ಮುಖ ಮಾಡಿಕೊಂಡಿದೆ. "ನಿನ್ನನ್ನೂ ನಿನ್ನ ದೇಶವನ್ನೂ ನಾನು ಇಲ್ಲಿಂದಲೇ ಸದಾ ವೀಕ್ಷಿಸುತ್ತಾ ರಕ್ಷಿಸುವೆನು" ಎಂದು ಶ್ರೀರಂಗನಾಥನು ವಿಭೀಷಣನಿಗೆ ಅಭಯವನ್ನು ಕೊಟ್ಟನು ಎಂದು ಶ್ರೀರಂಗಮಹಾತ್ಮೆಯಲ್ಲಿಯೂ ಆಳ್ವಾರರ ಪ್ರಬಂಧಗಳಲ್ಲಿಯೂ ಹೇಳಿದೆ. (ಪೆರಿಯಾಳ್ವಾರ್ ತಿರುಮೊಳಿ ೪-೯-೨)

# ಶ್ರೀ ಕಲ್ಯಾಣವೆಂಕಟೇಶ್ವರಸ್ವಾಮಿ ದೇವಾಲಯ
## ಶ್ರೀನಿವಾಸ ಮಂಗಾಪುರ

# ನೂತನ ಆರ್ಜಿತ ಸೇವೆಗಳು

ದಿನೇ ದಿನೇ ಹೆಚ್ಚುತ್ತಿರುವ ಭಕ್ತರ ಸಂದಣಿಯ ಅಪೇಕ್ಷೆಯಂತೆ ಶ್ರೀನಿವಾಸ ಮಂಗಾಪುರದ ಶ್ರೀ ಕಲ್ಯಾಣ ವೆಂಕಟೇಶ್ವರಸ್ವಾಮಿ ದೇವಾಲಯದಲ್ಲಿ ಎರಡು ಹೊಸ ಸೇವೆಗಳನ್ನು ಪ್ರವೇಶಗೊಳಿಸಲಾಗಿದೆ. ಅವುಗಳೆಂದರೆ -

## 1. ಶ್ರೀನಿವಾಸ ಅರ್ಚನಾ ದತ್ತಿಯೋಜನೆ :

ಹತ್ತು ವರ್ಷ ಕಾಲ ರೂ. 5000/- ದತ್ತಿ ನೀಡುವವರ ಅಪೇಕ್ಷೆಯ ದಿನದಂದು ವರ್ಷಕ್ಕೆ ಒಮ್ಮೆ ಶ್ರೀ ಕಲ್ಯಾಣ ವೆಂಕಟೇಶ್ವರಸ್ವಾಮಿಗೆ ಅರ್ಚನೆ ಮಾಡುವ ಅವಕಾಶ. ಈ ಹಣವನ್ನು ರಾಷ್ಟ್ರೀಕೃತ ಬ್ಯಾಂಕಿನಲ್ಲಿ ಠೇವಣಿಯಿಡಲಾಗುವುದು.

* ಈ ಸೇವೆಯಲ್ಲಿ ವ್ಯಕ್ತಿ, ಸಂಘ, ಸಂಸ್ಥೆಯ ಹೆಸರಿನಲ್ಲಿ ಅರ್ಚನೆ ನಡೆಸಬಹುದು.
* ದತ್ತಿ ನೀಡುವವರಿಗೆ ಅರ್ಚನೆಯ ದಿನವನ್ನು ನಿರ್ಧರಿಸುವ ಅವಕಾಶವಿದೆ.
* ದತ್ತಿ ನೀಡುವವರ ವರ್ಷಕ್ಕೆ ಒಮ್ಮೆ ಆಯ್ಕೆಯ ದಿನದಂದು ಅವರ ಕುಟುಂಬದ ಐದುಮಂದಿಗೆ ಅಷ್ಟೋತ್ತರ ಸಹಸ್ರನಾಮಾರ್ಚನೆಯ ವೇಳೆಯಲ್ಲಿ ಉಚಿತ ದರ್ಶನ ವುಂಟು.
* ಈ ಯೋಜನೆಯನ್ವಯ ದತ್ತಿ ನೀಡುವವರಿಗೆ ಒಂದು ಅಂಗವಸ್ತ್ರ, ಒಂದು ಕುಪ್ಪಸದ ಕಣದ ಬಹುಮಾನವುಂಟು.
* ಈ ದತ್ತಿಯನ್ವಯ ಅರ್ಚನಸೇವೆ ಹತ್ತು ವರ್ಷಕ್ಕೆ ಸೀಮಿತ.

## 2. ಅಭಿಷೇಕಾನಂತರ ವಸ್ತ್ರಾಲಂಕರಣ ಸೇವೆ :

ತಿರುಮಲೆಯಲ್ಲಿ ಶ್ರೀ ವೆಂಕಟೇಶ್ವರಸ್ವಾಮಿಯ ಶುಕ್ರವಾರಾಭಿಷೇಕದ ನಂತರ ವಸ್ತ್ರಾಲಂಕರಣಕ್ಕಾಗಿ ಭಕ್ತರು ವಸ್ತ್ರಕಾಣಿಕೆ ನೀಡುವುದು ಪದ್ಧತಿ. ಈ ದಿನಗಳಲ್ಲಿ ಹೆಚ್ಚಿರುವ ಯಾತ್ರಿಕ ಸಂದಣಿಯಿಂದಾಗಿ ಈ ವಸ್ತ್ರಕಾಣಿಗೆ ನೀಡಬಯಸುವ ಗೃಹಸ್ಥರು ಐದು ವರ್ಷಗಳಿಗೂ ಹೆಚ್ಚುಕಾಲ ಕಾಯಬೇಕಾಗುತ್ತದೆ. ಇಂತಹವೇ ವಸ್ತ್ರಕಾಣಿಕೆಯನ್ನು ಶ್ರೀನಿವಾಸ ಮಂಗಾಪುರದಲ್ಲೂ ಈಗ ಸ್ವೀಕರಿಸಲಾಗುವ ವಸ್ತ್ರಾಲಂಕರಣ ಸೇವೆಯನ್ನು ಪ್ರವೇಶಗೊಳಿಸಲಾಗಿದೆ.

* ಈ ಸೇವೆಯಲ್ಲಿ ತಿರುಮಲೆಯಲ್ಲಿಯಂತೆಯೇ ಪ್ರತಿ ಶುಕ್ರವಾರವೂ ಅಭಿಷೇಕಾನಂತರ ಸ್ವಾಮಿಗೆ ನೂತನ ಮೇಲ್ಚಾತ್ ಹಾಗೂ ಉತ್ತರೀಯದಿಂದ ಅಲಂಕರಣ ನಡೆಸಲಾಗುವುದು.
* ಭಕ್ತರಿಂದ ಈ ಸೇವೆಗಾಗಿ ವಸ್ತ್ರವನ್ನು (ಮೇಲ್ಚಾತ್ ಹಾಗೂ ಉತ್ತರೀಯ) ಅಥವಾ ಅದರ ಬೆಲೆ ರೂ. 15000/- ಸ್ವೀಕರಿಸಲಾಗುವುದು.
* ತಿರುಮಲೆಯಲ್ಲಿ ನಂತೆಯೇ ಭಕ್ತರ ಕಡೆಯ ಐದು ಮಂದಿಗೆ ಅಭಿಷೇಕ ದರ್ಶನದ ಏರ್ಪಾಡು ಮಾಡಲಾಗುವುದು.
* ಅಭಿಷೇಕಾನಂತರ ಗೃಹಸ್ಥರಿಗೆ ಒಂದು ಅಂಗವಸ್ತ್ರ ಹಾಗೂ ಒಂದು ಕುಪ್ಪಸದ ಕಣವನ್ನು ಬಹೂಕರಿಸಲಾಗುವುದು.

ಯಾತ್ರಿಕರು ಶ್ರೀನಿವಾಸ ಮಂಗಾಪುರದ ಶ್ರೀ ಕಲ್ಯಾಣವೆಂಕಟೇಶ್ವರಸ್ವಾಮಿಯ ಈ ಸೇವೆಗಳಲ್ಲಿ ಭಾಗವಹಿಸಿ ಅನುಕೂಲಗಳನ್ನು ಪಡೆಯಬಹುದಾಗಿದೆ.

**ತಿ.ತಿ.ದೇ.**

ದೇವಸ್ಥಾನದ ನಿರ್ಮಾಣ ಕಾರ್ಯ ಪುಣ್ಯಫಲಪ್ರದವಾದುದು, ಅದೊಂದು ಧರ್ಮಕಾರ್ಯ, ಇಹಪರ ಸೌಖ್ಯಕ್ಕೆ ಕಾರಣವಾದುದು ಎಂದು ಭಾವಿಸಿ ಕಾಲಾನುಕಾಲದಿಂದಲೂ ರಾಜರು, ರಾಣಿಯರು ಅವರವರ ಗುರುವಿನ ಆದೇಶದಂತೆ ಸೇವೆ ಸಲ್ಲಿಸಿರುತ್ತಾರೆ. ಕ್ರಮೇಣ ವರ್ತಕ ಸಮುದಾಯ, ಶ್ರೀಮಂತರು, ಎಲ್ಲ ಆಸ್ತಿಕ ಮಹಾಶಯರು ಈ ಸೇವೆಯನ್ನು ಮುಂದುವರೆಸಿಕೊಂಡು ಬಂದಿರುತ್ತಾರೆ. ಹೊಸ ದೇವಸ್ಥಾನ ಕಟ್ಟಿಸುವುದಕ್ಕಿಂತ ಜೀರ್ಣವಾಗಿರುವ ಹಳೆ ದೇವಸ್ಥಾನಗಳನ್ನು ಉದ್ಧಾರ ಮಾಡುವುದು ಪುಣ್ಯಕಾರ್ಯ ಎಂದು ಶಾಸ್ತ್ರ ಹೇಳುವುದು.

"ದೇವಾಲಯಾನಾಂ ನಿರ್ಮಾಣಾತ್
ಪುಣ್ಯಕೋಟಿ ಫಲಂ ಭವೇತ್
ಜೀರ್ಣಾಲಯಾನಾಂ ಉದ್ಧಾರಂ
ತತಃ ಪುಣ್ಯತಮಂ ದಿದುಃ"

ದೇವಸ್ಥಾನದ ರಾಜಗೋಪುರ ಕಣ್ಣಿಗೆ ಕಾಣುವ ಪ್ರಥಮ ಭಾಗ. ಸಮರಗಳಲ್ಲಿ ಪ್ರಥಮವಾಗಿ ಲಯವಾಗುವುದೂ ಇದೇ. ದುರಸ್ತಿ ಕಾರ್ಯದಲ್ಲಿ ಇದೇ ಮೊದಲು ಹಾಗೂ ದುಬಾರಿ. ಜೀರ್ಣೋದ್ಧಾರ, ನವೀಕರಣ ಕಾರ್ಯಗಳು ಈಗ ಭರದಿಂದ ಸಾಗುತ್ತಿವೆ. ಬಂಡವಾಳ ಸಂಗ್ರಹಣೆ, ಉದ್ಯೋಗಾವಕಾಶ, ತಾಂತ್ರಿಕ ಕೌಶಲ್ಯ ಪ್ರದರ್ಶನ ಮುಂತಾದ ಆರ್ಥಿಕ ಚಟುವಟಿಕೆಗಳಿಂದಾಗಿ ಇವಕ್ಕೆ ಆದ್ಯತೆ ಇದೆ. ಇದಕ್ಕಾಗಿ ತಮಿಳುನಾಡಿನಲ್ಲಿ ತಿರುಪ್ಪಾಣಿ, ಕರ್ನಾಟಕದಲ್ಲಿ ಜೀರ್ಣೋದ್ಧಾರ ಕೈಂಕರ್ಯ ಸಭಾಮುಂತಾದ ಪ್ರತ್ಯೇಕ ಸಮಿತಿಗಳಿವೆ. ಇಂಥಾ ಸತ್ಕಾರ್ಯಗಳಿಗೆ ಸಾರ್ವಜನಿಕ ಭಕ್ತರಿಂದ ಎಲ್ಲರೀತಿಯ ಸಹಾಯ ಸಹಕಾರ ಒದಗುವುದು. ತಿರುಮಂಗೈ ಆಳ್ವಾರರು ತಾವು ಸ್ಪರ್ಧೆ ವಾದಗಳಲ್ಲಿ ಜಯಿಸಿ ಸಂಪಾದಿಸಿದ್ದ ಆಸ್ತಿಯನ್ನೆಲ್ಲಾ ಶ್ರೀರಂಗ ಗೋಪುರ ಪ್ರಾಕಾರ ನಿರ್ಮಾಣಕ್ಕಾಗಿ ಸದ್ವಿನಿಯೋಗಮಾಡಿದರು. ೨೨೬ ಅಡಿಗಳೆತ್ತರದ ಶ್ರೀರಂಗರಾಜಗೋಪುರವು ಮುಕ್ಕೂರ್ ಮುನಿಗಳಾದ ೪೪ ನೆ ಅಹೋಬಿಲಸ್ವಾಮಿಗಳ ನೇತೃತ್ವದಲ್ಲಿ ೧೯೮೦ ರಲ್ಲಿ ಆರಂಭವಾಗಿ ೧೯೮೭ ರಲ್ಲಿ ಮುಕ್ತಾಯವಾಗಿ ಏಷ್ಯಾದಲ್ಲೇ ಅತ್ಯಂತ ಎತ್ತರ ಹಾಗೂ ಬೃಹದಾಕಾರವಾದ ರಾಜಗೋಪುರ ಎಂದು ದಾಖಲಾಯಿತು. ಇದೇ ಸ್ವಾಮಿಗಳಿಂದ ಆದನೂರು, ಪುಳ್ಳಂಬೂದಂ ಗುಡಿ ಹಾಗೂ ಅಹೋಬಿಲ ರಾಜಗೋಪುರಗಳು ಅಸ್ತಿತ್ವಕ್ಕೆ ಬಂದುವು. ಭಾರತೀಯ ಪಾಚ್ಯವಸ್ತು ಸಂಶೋಧನ ಸಮೀಕ್ಷ [ASI] ಕರ್ನಾಟಕ ತಮಿಳು ನಾಡುಗಳಲ್ಲಿ ದೇವಸ್ಥಾನಗಳ ದುರಸ್ತಿ ಹಾಗೂ ನವೀಕರಣ ಕಾರ್ಯಗಳನ್ನು ಕೈಗೊಂಡಿದೆ.

ಗೋವಿಂದನಡಿದಾವರೆಗಳಲ್ಲಿ ಶರಣು



# ಬ್ರಹ್ಮೋತ್ಸವದಲ್ಲಿ ದಾಸ ಸಾಹಿತ್ಯ ಪ್ರಾಜೆಕ್ಟ್





ತಿರುಪತಿಯ ತಿಮ್ಮಪ್ಪನನ್ನು ಹಾಡಿ ಹೊಗಳಿ ಕುಣಿಯದ ಹರಿದಾಸರು ಇಲ್ಲವೆಂದರೂ ನಡೆದೀತು. ಅಂತಹ ಹರಿದಾಸರ ಹಿರಿಮೆಯನ್ನು ಸಾರಲೆಂದೇ ತಿ.ತಿ.ದೇ. ದಾಸಸಾಹಿತ್ಯ ಪ್ರಾಜೆಕ್ಟ್ ಸೊಂಟ ಕಟ್ಟಿ ನಿಂತಿದೆ. ಆ ಮೂಲಕವಾಗಿ ಹರಿಯ ಹಿರಿಮೆಯನ್ನು ಘೋಷಿಸುವ ಉದ್ದೇಶ. ಹರಿಗೆ ಬ್ರಹ್ಮಸ್ವತಃ ಮುಂದೆ ನಿಂತು ಮಾಡಿದ ಉತ್ಸವ ಬ್ರಹ್ಮೋತ್ಸವವೆಂದಮೇಲೆ ಅಲ್ಲಿ ಹರಿದಾಸರು ಭಾಗವಹಿಸದೆ ಇರಲುಂಟೆ. ಬ್ರಹ್ಮೋತ್ಸವದ ವೇಳೆಗೆಂದೇ ಕರ್ನಾಟಕದ ಮೂಲೆ ಮೂಲೆಗಳಿಂದ ಹೊರಟು ಸ್ವಾಮಿಯನ್ನು ಸಂದರ್ಶಿಸಿ ಆನಂದಿಸಿ ಹಾಡಿದವರು ಪುರಂದರದಾಸರಿಂದ ಇಂದಿನ ವರೆಗಿನ ಎಲ್ಲ ಹರಿದಾಸರೂ ಸಹ. ಹೀಗೆ ಬರುವ ಹರಿದಾಸರ ಸೌಲಭ್ಯ ಸೌಕರ್ಯಗಳನ್ನು ಗಮನಿಸುತ್ತ ಬ್ರಹ್ಮೋತ್ಸವದಲ್ಲಿ ಅವರು ಪಾಲುಗೊಳ್ಳುವಿಕೆಯನ್ನು ವ್ಯವಸ್ಥಿತವಾಗಿ ನೆರವೇರಿಸುವುದಕ್ಕೆ ಹಲವಾರು ಕಾರ್ಯಕ್ರಮಗಳನ್ನು ದಾಸಸಾಹಿತ್ಯ ಪ್ರಾಜೆಕ್ಟ್ ಹಮ್ಮಿಕೊಂಡಿದ್ದು ಈ ಬಾರಿಯ ಎರಡೂ ಬ್ರಹ್ಮೋತ್ಸವಗಳಲ್ಲಿ ಮಹತ್ವಪೂರ್ಣವಾದ ಆಕರ್ಷಕವಾದ ಸೇವೆಯನ್ನು ಸಲ್ಲಿಸಿದೆ.

ಈ ಬಾರಿ ಮೊದಲನೆಯದಾಗಿ ವಾರ್ಷಿಕ ಬ್ರಹ್ಮೋತ್ಸವಗಳು 14-9-96 ರಿಂದ 23-9-96 ವರೆಗೂ ನವರಾತ್ರಿ ಬ್ರಹ್ಮೋತ್ಸವಗಳು 12-10-96 ರಿಂದ 21-10-96 ರವರೆಗೂ ನಡೆದು ಯಶಸ್ವಿಯಾದವು. ಈ ಯಶಸ್ಸಿನಲ್ಲಿ ತಿ. ತಿ. ದೇವಸ್ಥಾನಗಳ ಅಂಗ ಸಂಸ್ಥೆಗಳಾದ ಧರ್ಮಪ್ರಚಾರ ಪರಿ



ಷತ್, ಆಳ್ವಾರ್ ದಿವ್ಯಪ್ರಬಂಧ ಪ್ರಾಜೆಕ್ಟ್, ಅಣ್ಣಮಾಚಾರ್ಯ ಪ್ರಾಜೆಕ್ಟ್, ದಾಸಸಾಹಿತ್ಯ ಪ್ರಾಜೆಕ್ಟ್ ಮೊದಲಾದವುಗಳೆಲ್ಲ ಸಕ್ರಿಯವಾಗಿ ಪಾಲುಗೊಂಡವು ಧರ್ಮಪ್ರಚಾರ ಪರಿಷತ್‌ನ ಆಶ್ರಯದಲ್ಲಿ ತಿರುಮಲೆಯ ಆಸ್ಥಾನಮಂಟಪದಲ್ಲಿ ದಿನವೂ ಬೆಳಗಿನಿಂದ ರಾತ್ರಿಯವರೆಗೆ ಪುರಾಣಪ್ರವಚನ, ಸಂಗೀತ ಹರಿಕಥೆ ಧಾರ್ಮಿಕ ಉಪನ್ಯಾಸ ಮೊದಲಾದವುಗಳು ನಡೆದವು. ದಿನವೂ ತಿರುಮಲೆಯ ವಾತಾವರಣವನ್ನು ಧರ್ಮದ ಗಂಧರ್ವ ಲೋಕದಂತೆ ಸಜ್ಜುಗೊಳಿಸಲು ವಿವಿಧ ಅಂಗಸಂಸ್ಥೆಗಳು ಪ್ರಯತ್ನಿಸಿ ಸಫಲವಾದವು. ಉತ್ಸವರ ಊರಮೆರವಣಿಗೆಯಲ್ಲಿ ವೇದ, ಪ್ರಬಂಧ, ಕೀರ್ತನೆಗಳ ಮಂಗಳ ವಾದ್ಯ ಘೋಷಗಳು ಸೇರಿ ಆಕಾಶವೆಲ್ಲ ನಾದಬ್ರಹ್ಮಮಯವಾಗಿ ನಡೆದಾಡುವವರ ಮೈಮನಗಳೆಲ್ಲ ಪುಲಕಿತವಾದವು.

ದಾಸಸಾಹಿತ್ಯ ಪ್ರಾಜೆಕ್ಟ್ ಬ್ರಹ್ಮೋತ್ಸವದಲ್ಲಿ ಹಲವು ರೀತಿಯಲ್ಲಿ ಪಾಲುಗೊಂಡು ಜನಮನ್ನಣೆಯನ್ನು ಪಡೆಯಿತು. ಎರಡೂ ಬ್ರಹ್ಮೋತ್ಸವಗಳಲ್ಲೂ ಮೂರು - ನಾಲ್ಕು ದಿನಗಳ ಕಾಲ ಕರ್ನಾಟಕ ಆಂಧ್ರಪ್ರದೇಶ, ತಮಿಳುನಾಡುಗಳಿಂದ ಹಲವಾರು ಭಜನಮಂಡಳಿಗಳು ಆಗಮಿಸಿದ್ದು ಬೆಳಗಿನ ನಗರ ಸಂಕೀರ್ತನೆಯಲ್ಲೂ, ವಿವಿಧ ವಾಹನ ಸೇವೆಗಳ ಮುಂದಿನ ಭಜನ ಗೋಷ್ಠಿಗಳಲ್ಲಿಯೂ ಪಾಲುಗೊಂಡಿದ್ದವು. (ಇವುಗಳ ಪಟ್ಟಿಯನ್ನು ಚೌಕ

## ಬ್ರಹ್ಮೋತ್ಸವದಲ್ಲಿ ಭಾಗವಹಿಸಿದ್ದ ಭಜನ ಮಂಡಳಿಗಳು
## 12-10-96 ರಿಂದ 21-10-96

1. ಗೋಪಾಲವಿಠಲ ಮಹಿಳಾಭಜನ ಮಂಡಳಿ, ಸಿಂಧನೂರು.
2. ರಾಮಚಂದ್ರ ಭಜನ ಮಂಡಳಿ, ಸಿಂಧನೂರು.
3. ರಂಗವಿಠಲ ಭಜನ ಮಂಡಳಿ, ಬೆಂಗಳೂರು.
4. ರುಕ್ಮಿಣೀಶ ಮಹಿಳಾ ಭಜನ ಮಂಡಳಿ, ತಿರುಪತಿ.
5. ಗುರುಜಗನ್ನಾಥದಾಸ ಭಜನ ಮಂಡಳಿ, ಗಜೇಂದ್ರಗಡ.
6. ಲಕ್ಷ್ಮೀ ನರಸಿಂಹ ಭಜನಮಂಡಳಿ, ಮೈಸೂರು.
7. ಈಶ್ವರ ಭಜನಮಂಡಳಿ, ರಾಯಚೂರು.
8. ವ್ಯಾಸದಾಸ ಭಜನ ಮಂಡಳಿ, ರಾಯಚೂರು.
9. ಭಾರತೀ ಮಹಿಳಾ ಭಜನ ಮಂಡಳಿ, ತಿರುಪತಿ.
10. ವಾದಿರಾಜ ಭಜನ ಮಂಡಳಿ, ಸಿರುಗುಪ್ಪ.
11. ಪರಿಮಳ ಭಜನ ಮಂಡಳಿ, ಕೊಪ್ಪಳ.
12. ಪುರಂದರದಾಸ ಸಂಘ, ಟ್ರಿಪ್ಲಿಕೇನ್ ಮದರಾಸು.
13. ಗೋಪಿಕಾ ಭಜನ ಮಂಡಳಿ, ಬಿಜಾಪುರ.



ವಲ್ಲಿ ನೀಡಲಾಗಿದೆ.) ಉತ್ಸವರ ಊರ ಮೆರವಣಿಗೆಯಲ್ಲಿ ಡೋಲುವಾದ್ಯಸೇವೆ ವಿಶೇಷ ಉಲ್ಲೇಖನೀಯ. ಜೊತೆಗೇ ವಿವಿಧ ವೇಶಗಳಲ್ಲಿ, ಕೋಲಾಟ ಮೇಲಾಟಗಳಲ್ಲಿ ಸ್ವಾಮಿಯನ್ನು ಬರಮಾಡಿಕೊಳ್ಳುವ ವಿವಿಧ ಹರಿದಾಸರ ಸಂಕೀರ್ತನೆಗಳಿಗೆ ಮೂರ್ತರೂಪಕೊಟ್ಟು, ಉತ್ಸಾಹ ಸಡಗರಗಳಿಂದ ಹಾಡಿ ಕುಣಿದ ಹರಿದಾಸರ ಕೀರ್ತನ ಸರಳಿ ಸ್ವಾಮಿಯನ್ನು ನೋಡಬಂದವರನ್ನೂ, ನರ್ತನಕ್ಕೆಳೆಯಿತು ಎಂಬುದರಲ್ಲಿ ಅಚ್ಚರಿಯೇನಿಲ್ಲ.

ತಿರುಮಲೆಯ ಆಸ್ಥಾನ ಮಂಟಪದಲ್ಲಿ ದಿನವೂ ಬೆಳಗ್ಗೆ 7 ರಿಂದ 8 ರವರೆಗೆ ಧಾರ್ಮಿಕ ಉಪನ್ಯಾಸ ಗೋಷ್ಠಿಗಳು ನಡೆದವು. ಸರ್ವಶ್ರೀ ಆದ್ಯ ರಾಮಾಚಾರ್ಯ, ಕೆ. ಅಪ್ಪಣಾಚಾರ್ಯ, ಎಸ್. ವೇದವ್ಯಾಸಾಚಾರ್ಯ, ಆರ್. ಜಿ. ಮಾಳಿಗಿ, ಹಯವದನ ಪುರಾಣಿಕರುಗಳು ಮೊದಲ ಬ್ರಹ್ಮೋತ್ಸವಕಾಲದಲ್ಲೂ, ಎರಡನೆಯ ಬ್ರಹ್ಮೋತ್ಸವ ಕಾಲದಲ್ಲಿ ಸರ್ವಶ್ರೀ ಸ್ವಾಮಿರಾವ್ ಕುಲಕರ್ಣಿ, ಕೃಷ್ಣ ಕೊಲ್ಹಾರ ಕುಲಕರ್ಣಿ, ಮಾಳಿಗಿ ಜಯತೀರ್ಥಾಚಾರ್ಯ, ಜಿ. ಎಂ. ಹೆಗಡೆ, ರಘೋತ್ತಮಾಚಾರ್ಯರುಗಳು ಹಲವಾರು ಹರಿದಾಸರ ಜೀವನ, ಕೃತಿಗಳ ವಿಶೇಷ ವೈಶಿಷ್ಟ್ಯಗಳನ್ನು ವಿವರಿಸಿದರು.

ಆಸ್ಥಾನ ಮಂಟಪದಲ್ಲಿ ಮೊದಲ ಬ್ರಹ್ಮೋತ್ಸವದಲ್ಲಿನ 18, 19, ದಿನಾಂಕಗಳಂದು ಹೈದರಾಬಾದಿನ ಶ್ರೀ ಎಂ. ಗೋಪಾಲಕೃಷ್ಣ ವೃಂದದವರೂ ಶ್ರೀಮತಿಯರಾದ ವಾರುಣಿ ಭಾರತಿಯವರೂ ಸಂಗೀತ ಸಭೆಗಳನ್ನು ನಡೆಸಿಕೊಟ್ಟರು. ಹರಿದಾಸರ ಕೃತಿಗಳನ್ನು ಹಾಡಿ ಬ್ರಹ್ಮೋತ್ಸವದ ಭಕ್ತರನ್ನು ಮುಗ್ಧಗೊಳಿಸಿದರು. ಎರಡನೆಯ ಬ್ರಹ್ಮೋತ್ಸವದಲ್ಲಿ ಸರ್ವಶ್ರೀ ಅನಂತಕುಲಕರ್ಣಿ, ಎನ್. ರಾಮಚಂದ್ರರಾವ್ ಅವರುಗಳು ಕ್ರಮವಾಗಿ ಅಕ್ಟೋಬರ್ 12 ಹಾಗೂ 13 ರಂದು ದಾಸರ ಕೃತಿಗಳನ್ನು ಹಾಡಿ ಸ್ವಾಮಿಗೆ ಸಲ್ಲಿಸಿದರು. 14-10-96 ರಂದು ಸುಬ್ರಹ್ಮಣ್ಯದ ಶ್ರೀ ಶ್ರೀ ವಿದ್ಯಾಭೂಷಣತೀರ್ಥ ಶ್ರೀಪಾದಂಗಳು ತಿರುಮಲೆಗೆ ಆಗಮಿಸಿ ಸ್ವಾಮಿಯ ಸೇವೆಯಲ್ಲಿ ಹರಿದಾಸರ ಕೃತಿಗಳನ್ನು ಅರ್ಪಿಸಿದರು. ಅವರ ಸಂಗೀತ ಸಭೆ ಎಂದಿನಂತೆ ಭಕ್ತರನ್ನು ಆನಂದದ ಅಲೆಗಳಲ್ಲಿ ಮುಳುಗಿ ಏಳುವಂತೆ ಮಾಡಿತು ಎಂಬುದರಲ್ಲಿ ಅತಿಶಯೋಕ್ತಿಯೇನಿಲ್ಲ.





## ಬ್ರಹ್ಮೋತ್ಸವದಲ್ಲಿ ಭಾಗವಹಿಸಿದ್ದ ಭಜನ ಮಂಡಳಿಗಳು

## 14-9-96 ರಿಂದ 23-9-96

1. ವಿಜಯ ವಿಠಲ ಮಹಿಳಾ ಭಜನ ಮಂಡಳಿ, ಗಂಗಾವತಿ.
2. ಪ್ರಹ್ಲಾದ ರಾಜ ಭಜನಾ ಮಂಡಳಿ, ನಾರಾಯಣಪೇಟೆ.
3. ರಾಘವೇಂದ್ರ ಸೇವಾ ಸಮಿತಿ, ಮಹಬೂಬ ನಗರ.
4. ಇಂದಿರೇಶ ಭಜನಾ ಮಂಡಳಿ, ರಾಯಚೂರು.
5. ಪರಿಮಳ ಸಾಂಸ್ಕೃತಿಕ ಸಂಸ್ಥೆ ಹೈದರಾಬಾದ್.
6. ರಾಘವೇಂದ್ರ ಮಹಿಳಾ ಭಜನಮಂಡಳಿ, ಮಂತ್ರಾಲಯ.
7. ಕೊರವರೇಶ ಭಜನಾ ಮಂಡಳಿ, ಶಕ್ತಿನಗರ.
8. ಸುಂದರನಗರ ಮಹಿಳಾ ಭಜನ ಮಂಡಳಿ, ದೆಂಗಳೂರು.
9. ಗುರುಜಗನ್ನಾಥದಾಸ ಭಜನ ಮಂಡಳಿ, ಕೌತಾಳ.
10. ಶ್ರೀರಾಮ ಭಜನಮಂಡಳಿ, ಆದೋನಿ.
11. ಗುರುರಾಜ ಭಜನಮಂಡಳಿ, ಲಿಂಗಸುಗೂರು.
12. ಶ್ರೀಶ ಪ್ರಾಣೇಶದಾಸ ಭಜನಮಂಡಳಿ, ಲಿಂಗಸೂಗೂರು.
13. ಗುರುರಾಜ ಭಜನ ಮಂಡಳಿ, ಕುಷ್ಟಗಿ.
14. ಅಂಬ್ರಣಿ ಮಹಿಳಾ ಭಜನ ಮಂಡಳಿ, ದೆಂಗಳೂರು.
15. ಮಹಾಲಕ್ಷ್ಮಿ ಭಜನ ಮಂಡಳಿ, ದೆಂಗಳೂರು.
16. ಚೆನ್ನಕೇಶವ ಮಹಿಳಾ ಭಜನ ಮಂಡಳಿ, ಕೌತಾಳ.





ಶ್ರೀ ಸುಬ್ರಹ್ಮಣ್ಯದ ಶ್ರೀ ಶ್ರೀ ವಿದ್ಯಾಭೂಷಣತೀರ್ಥಶ್ರೀಪಾದಂಗಳವರು (14-10-96)

ಶ್ರೀ ಸ್ವಾಮಿರಾವ್ ಕುಲಕರ್ಣಿ (17-10-96)

ಶ್ರೀಕೃಷ್ಣ ಕೊಲ್ಹಾರ ಕುಲಕರ್ಣಿ 18-10-96



ಬೆಂಗಳೂರು ಶ್ರೀಮತಿ ವಾರುಣಿ ಹಾಗೂ ಶ್ರೀಮತಿಭಾರತಿ (19-9-96)



ಹೈದರಾಬಾದಿನ ಶ್ರೀ ಎಂ. ಗೋಪಾಲಕೃಷ್ಣ (18-9-96)



ಶ್ರೀ ಆದ್ಯರಾಮಾಚಾರ್ಯ (19-9-96)



ಶ್ರೀ ಕೆ. ಅಪ್ಪಣ್ಣಾಚಾರ್ಯ(20-9-96



ಶ್ರೀ ವೇದವ್ಯಾಸಾಚಾರ್ಯ(21-9-96



ಶ್ರೀ ಆರ್. ಜಿ. ಮಾಳಗಿ(22-9-96

# ಮಣವಾಳ ಮಾಮುನಿ ಸ್ತೋತ್ರ ರತ್ನಗಳು

---ಎಂ. ಆರ್. ನರಸಿಂಹನ್.

ಆಚಾರ್ಯ ಮಣವಾಳ ಮಾಮುನಿಗಳು ಎಂದರೆ ಶ್ರೀ ವೈಷ್ಣವರಿಗೆ ಪರಮ ಆದರ. ಆಚಾರ್ಯ ರಾಮಾನುಜರನ್ನು ಕಂಡಷ್ಟೇ ಆನಂದ. ಶ್ರೀ ವೈಷ್ಣವ ಆಚಾರ್ಯ ಪರಂಪರೆಯಲ್ಲಿ ಇವರೇ ಕಡೆಯವರು. ಇವರಾದ ನಂತರ ಯಾರೂ ಆಚಾರ್ಯರೇ ಬರಲಿಲ್ಲವೆ ಎಂದರೆ ಅದು ತಪ್ಪು. ಆಚಾರ್ಯ ಪರಂಪರೆಯ ವಿಶಿಷ್ಟಸ್ಥಾನವನ್ನು ಗಮನಿಸಿದ ಶ್ರೀ ವೈಷ್ಣವರು, ಇಂತಹ ಹಿರಿಯರ ಪಂಕ್ತಿಗೆ ತಮ್ಮನ್ನು ಸರಿಸಮಾನಾಗಿ ಭಾವಿಸಿಕೊಳ್ಳಲು ಇಷ್ಟಪಡದೆ ಮಣವಾಳ ಮಹಾಮುನಿಗಳೊಂದಿಗೇ ಆ ಪರಂಪರೆಯನ್ನು ನಿಲ್ಲಿಸಿದರು. ಇದು ಶ್ರೀ ವೈಷ್ಣವರ ಹಿರಿಮೆ. ಶ್ರೀ ವೈಷ್ಣವ ಗುರುಪರಂಪರೆಯನ್ನು ಒಂದು ಹಾರಕ್ಕೆ ಹೋಲಿಸಿದರೆ ಅದರ ಎರಡು ಕೊನೆಗಳಲ್ಲಿ ಮೊದಲನೆಯ ಕೊನೆ ಸಾಕ್ಷಾತ್ ಪರಮಾತ್ಮನಿಂದ ಆರಂಭವಾಗುವುದು ಮುಕ್ತಾಯದ ಕೊನೆಗೆ ನಿಲ್ಲುವವರು ಶ್ರೀ ಮಣವಾಳ ಮಾಮುನಿಗಳು. ನಡುಮಧ್ಯದ ರತ್ನಪದಕ ಅಥವಾ ನಾಯಕಮಣಿ ಆಚಾರ್ಯ ಶ್ರೀರಾಮಾನುಜರು. ಪರಮಾತ್ಮನಿಂದ ಪ್ರಾರಂಭವಾಗುವ ಕಡೆಯಲ್ಲಿ ರಾಮಾನುಜರವರೆಗೂ ಆಳ್ವಾರ್ ಪರಂಪರೆ ಬರುತ್ತದೆ. ನಂತರದ ಹಾರದ ಕಡೆಗೆ ಆಚಾರ್ಯ ಪರಂಪರೆ ಸಲ್ಲುತ್ತದೆ ಎಂದರೆ ಈ ಗುರುಪರಂಪರೆಯ ಚಿತ್ರಪೂರ್ಣವಾಗುವುದು. ರಾಮಾನುಜರ ಹಿಂದೆ ಶ್ರೀಮನ್ನಾಥ ಮುನಿಗಳು, ಶ್ರೀ ಯಾಮುನರು ಆಚಾರ್ಯಪಂಕ್ತಿಗೆ ಸೇರಿದರೂ ಸ್ಥೂಲವಾಗಿ ಈ ರೀತಿ ಹಾರವನ್ನು ನಾವು ಚಿತ್ರಿಸಬಹುದು. ಏತಕ್ಕೆಂದರೆ ಆಚಾರ್ಯನಾಥಮುನಿಗಳು ಆಚಾರ್ಯ ಪರಂಪರೆಗೆ ಮೊದಲಿಗರು. ಇವರು ಶ್ರೀ ವೈಷ್ಣವ ಸಿದ್ಧಾಂತಕ್ಕೆ ಒಂದು ನೀಲಿ ನಕ್ಷೆಯನ್ನು ಮೊದಲಿಗೆ ತಯಾರಿಸಿದರು. ನಂತರ ಯಾಮುನರು ಶ್ರೀ ವೈಷ್ಣವಸಿದ್ಧಾಂತವೆಂಬ ಕಟ್ಟಡಕ್ಕೆ ಪಾಯ ತೋಡಿದರು ಎನ್ನಬಹುದು. ಶ್ರೀರಾಮಾನುಜರು ಅಸ್ತಿವಾರ ಹಾಕಿದರು ಎಂದರೆ ಅತ್ಯಂತ ಸಮಂಜಸ ಎನಿಸುತ್ತದೆ.

ಶ್ರೀ ವೈಷ್ಣವ ಸಿದ್ಧಾಂತದಲ್ಲಿ ಮುಮುಕ್ಷು, ಪ್ರಪತ್ತಿ, ಪ್ರಪನ್ನ ಎಂಬ ಪದಗಳು ಬೇಕೇಬೇಕು. ಚಿತ್, ಅಚಿತ್, ಈಶ್ವರ ಈ ಮೂರರ ಮೇಲೆ ನಿಂತಿ



ರುವ ಈ ಸಿದ್ಧಾಂತದಲ್ಲಿ ಜೀವ (ಚಿತ್) ಹೇಗೆ ಈಶ್ವರನನ್ನು ಆಶ್ರಯಿಸಬೇಕು. ಏಕೆ ಆಶ್ರಯಿಸಬೇಕು ಎಂದಾಗ ಮುಮುಕ್ಷು ಎಂಬ ಪದ ಬರುತ್ತದೆ ವ್ಯಾಪ್ತಿಗೆ. ಮುಮುಕ್ಷು ಎಂದರೆ ಮೋಕ್ಷವನ್ನು ಅಪೇಕ್ಷಿಸುವವನು ಎಂಬ ಅರ್ಥ. ಮೋಕ್ಷ ಎನ್ನುವುದು ಪರಮಪದ - ಶ್ರೀ ಮಹಾವಿಷ್ಣುವಿನ ವಾಸಸ್ಥಾನ.ಅವನ ಪಾದಾರವಿಂದಗಳನ್ನು ಸೇರುವುದೇ ಪರಮಪದ ಪ್ರಾಪ್ತಿ ಎನಿಸಿಕೊಳ್ಳುತ್ತದೆ. ಶ್ರೀ ವೈಷ್ಣವನ ಗುರಿ ಮೋಕ್ಷ. ಇದನ್ನು ಪಡೆಯಬೇಕಾದರೆ ಭಕ್ತಿಮಾರ್ಗಗಳಲ್ಲಿ ಒಂದಾದ ಪ್ರಪತ್ತಿ ಮಾರ್ಗವು ಆತನಿಗೆ ಸುಲಭೋಪಾಯ. ತನ್ನದೆಲ್ಲವನ್ನೂ ಬಿಟ್ಟು ಪರಮಾತ್ಮನಲ್ಲಿ ಶರಣಾಗತಿ ಮಾಡುವ ಮಾರ್ಗಕ್ಕೆ ಪ್ರಪತ್ತಿ ಮಾರ್ಗ ಎನ್ನುತ್ತಾರೆ. ಇಂತಹ ಪ್ರಪತ್ತಿಮಾರ್ಗ ಹಿಡಿದ ಮುಮುಕ್ಷುವನ್ನು ಪ್ರಪನ್ನನೆನ್ನುತ್ತಾರೆ. ಈ ಪ್ರಪತ್ತಿ ಭಕ್ತಿಯ ಅನುಸಂಧಾನಕ್ಕೆ ಕರ್ಮಕಾಂಡ ಪ್ರಧಾನ ಎಂದು ಕೆಲವರೂ ಭಕ್ತಿಯೇ ಪ್ರಧಾನ ಎಂದು ಕೆಲವರೂ ಆಚಾರ್ಯರಾಮಾನುಜರ ತತ್ವಗಳಲ್ಲಿ ವಾದ ಸೃಷ್ಟಿಸಿದರು. ಮಣವಾಳ ಮಾಮುನಿಗಳು ಮತ್ತು ಅವರ ಆಚಾರ್ಯರುಗಳೂ ಪ್ರಪತ್ತಿಮಾರ್ಗವನ್ನು ಆಳ್ವಾರುಗಳ ದಿವ್ಯಪ್ರಬಂಧಗಳ ಆಧಾರದಿಂದ ಎತ್ತಿ ಹಿಡಿದು ಅದಕ್ಕೆ ಪ್ರಥಮಸ್ಥಾನ ಸಲ್ಲತಕ್ಕದೆಂದು ತೀರ್ಮಾನಿಸಿದರು. ಮೊದಲನೆಯ ಗುಂಪಿನವರು ವೇದೋಪನಿಷತ್‌ಗಳನ್ನು ಆಧಾರವಾಗಿ ತೆಗೆದುಕೊಂಡರು. ಎರಡನೇ ಗುಂಪಿನವರು ವೇದೋಪನಿಷತ್‌ಗಳ ಜೊತೆಗೆ ಆಳ್ವಾರ್‌ಗಳ ದಿವ್ಯಪ್ರಬಂಧಗಳನ್ನೂ ಸುಲಭೋಪಾಯವೆಂದೂ ಅನುಸಂಧೇಯವೆಂದೂ ತೀರ್ಮಾನ ಕೈಕೊಂಡರು. ವೇದೋಪನಿಷತ್‌ಗಳಲ್ಲಿ ಸಿಕ್ಕದ ಪರಮಾತ್ಮನ ಸಗುಣತ್ವವನ್ನು ಅವರು ಇತಿಹಾಸ, ಪಾಂಚರಾತ್ರಾಗಮ ಮತ್ತು ಆಳ್ವಾರ್‌ಗಳ ದಿವ್ಯಪ್ರಬಂಧಗಳಿಂದ ಶ್ರೀ ರಾಮಾನುಜರು ಉದಾಹರಿಸಿರುವುದನ್ನು ಎತ್ತಿ ಹಿಡಿದು ಪ್ರಮಾಣವಾಗಿ ಸ್ವೀಕರಿಸಿದರು. ಆಚಾರ್ಯ ರಾಮಾನುಜರು ಶ್ರೀ ಭಾಷ್ಯಾದಿ ಪ್ರಸ್ಥಾನತ್ರಯಗಳ ವ್ಯಾಖ್ಯಾನಗಳನ್ನು ರಾಮಾಯಣ ಮಹಾಭಾರತ, ಪಾಂಚರಾತ್ರಾಗಮಗಳ ಮೇಲೆಯೇ ವೇದೋಪನಿಷತ್‌ಗಳ ವಾಕ್ಯಗಳಿಗೆ ಪ್ರಮಾಣಗಳನ್ನು ಸ್ವೀಕರಿಸಿರುವುದು. ಆಳ್ವಾರ್‌ಗಳ ದಿವ್ಯಪ್ರಬಂಧಗಳಲ್ಲಿಯೂ ಪರಮಾತ್ಮನ ಕೃಪೆ, ನಿರ್ಹೇತುಕ ಕಟಾಕ್ಷ,ಜೀವಾತ್ಮದ ಪರಮಾತ್ಮನ ಆಶ್ರಯ - ಎಲ್ಲವೂ ಅತ್ಯಂತ ಅರ್ಥಪೂರ್ಣವಾಗಿ ಚಿತ್ರಿಸಲ್ಪಟ್ಟಿವೆ. ಶ್ರೀಮನ್ನಾಥಮುನಿಗಳು ಆಳ್ವಾರ್‌ಗಳಿಗೆ ಇದಕ್ಕೆಂದೇ ಗೌರವ ಸಲ್ಲಿಸಿ ಅವರ ಪ್ರಬಂಧಗಳನ್ನು ಲೋಕದಲ್ಲಿ ಬೆಳಗಿಸಿದ್ದರು. ಯಾಮುನರಂತೂ "ತಸ್ಮೈ ನಮೋ ಮುನಿವರಾಯ ಪರಾಶರಾಯ" ಎಂದು ಕೃಷ್ಣಾಮೃತವನ್ನು ಜಗತ್ತಿಗೆ ನೀಡಿದ ಪರಾಶರರನ್ನು ಗೌರವಿಸಿದ್ದು. ಈ ಕೃಷ್ಣತೃಷ್ಣಾತತ್ವವನ್ನು ಲೋಕಕ್ಕೆ ಸಾರಿದ ನಮ್ಮಾಳ್ವಾರ್ ಅವರ ತಿರುವಾಯಮೊಳಿಗೆ ಪ್ರಬಂಧಗಳಲ್ಲಿ ಅಗ್ರಸ್ಥಾನ ನೀಡಿ ಗೌರವಿಸಿದ್ದುದು. ಮತ್ತು ನಮ್ಮಾಳ್ವಾರ್ ಅವರನ್ನು ಪ್ರಪನ್ನ ಜನರೂ ರೆಂಬುದಾಗಿ ತಮ್ಮ ಆಚಾರ್ಯರನ್ನಾಗಿ ಸ್ವೀಕರಿಸಿದ್ದು - ಇಂತಹ ನಮ್ಮಾಳ್ವಾರ್ ಶ್ರೀ ವೈಷ್ಣವ ಕುಲ - ಪ್ರಪನ್ನ ಜನಕ್ಕೇ ಮೊದಲನೆಯವರೆಂದು ಸಾರಿದರು. ಹೀಗೆ ನಮ್ಮಾಳ್ವಾರ್ ಅವರ ಪ್ರಪತ್ತಿಮಾರ್ಗ ಶ್ರೀ ವೈಷ್ಣವನಿಗೆ ಆಧಾರಸ್ತಂಭವಾಯಿತು. ರಾಮಾನುಜರಿಗೆ ಪ್ರಸ್ಥಾನ ತ್ರಯ

ಗಳ ಮೇಲೆ ಬರೆದ ಭಾಷ್ಯದೊಂದಿಗೆ ನಮ್ಮಾಳ್ವಾರ್ ಅವರ ತಿರುವಾಯ್ಮೊಳಿಗೆ ವ್ಯಾಖ್ಯಾನ ನಿರ್ಮಿಸಬೇಕೆಂಬ ಅತ್ಯುತ್ಕಟವಾದ ಆಕಾಂಕ್ಷೆ ಇದ್ದಿತು. ಅದನ್ನು ಪ್ರಬಂಧಕ್ಕೆ ತರಬೇಕೆಂದು ಅವರು ಆಶೆ ಪಟ್ಟಿದ್ದನ್ನು ಶ್ರೀ ಮಣವಾಳ ಮಾಮುನಿಗಳು ಮುಂದೆ ಪೂರೈಸಿದರು. ಇವರೇ ತಿರುವಾಯ್ಮೊಳಿ ವ್ಯಾಖ್ಯಾನಕ್ಕೆ ಭಗವದ್ವಿಷಯವೆಂದು ನಾಮಕರಣಮಾಡಿದರು. ತಮ್ಮ ಅಮೋಘವಾದ ವಿಶದವಾಕ್ ಸರಣಿಯಲ್ಲಿ ಜನರಿಗೆ ಈ ತಿರುವಾಯ್ಮೊಳಿಯ ಅಮೃತ ಧಾರೆಯನ್ನು ಪಾನಮಾಡಿಸಿ ಕೃತಾರ್ಥರಾದರು. ತಿರುವಾಯ್ಮೊಳಿಯ ಮೇಲೆ ಐದು ವ್ಯಾಖ್ಯಾನಗಳಲ್ಲಿ ವಿಸ್ತಾರವಾದ ವಡಕ್ಕುತ್ತಿರುವೀಧಿ ಪಿಳ್ಳೆ ಅವರ ಮುಪ್ಪತ್ತಾರಾಯಿರಪ್ಪಡಿಯನ್ನು ಪ್ರಚಾರಕ್ಕೆ ತಂದ ಕೀರ್ತಿ ಇವರದು. ಅದನ್ನು ಈಡು ಎಂದು ನಾಮಕರಣಮಾಡಿದರು. ಈ ಎಲ್ಲ ಪ್ರಚಾರ - ಪ್ರಸಾರ ಕಾರ್ಯದಿಂದಾಗಿ ಆಚಾರ್ಯ ಮಣವಾಳಮಾಮುನಿಗಳನ್ನು ರಾಮಾನುಜರ ಪುನರವತಾರ ಎಂದು ಜನ ಗೌರವಿಸಿತು. ರಾಮಾನುಜರೇ ನಮ್ಮಾಳ್ವಾರರ ಪುನರವತಾರವೆಂದು ನಂಬುವ ಶ್ರೀ ವೈಷ್ಣವರಿಗೆ ಹೀಗೆ ನಮ್ಮಾಳ್ವಾರರೇ ಮಣವಾಳಮಾಮುನಿಗಳಾಗಿ ಪ್ರಪತ್ತಿ ಭಕ್ತಿಮಾರ್ಗವನ್ನು ಉದ್ಧಾರಮಾಡಲು ಮತ್ತೆ ಹುಟ್ಟಿದರು ಎಂಬ ಭಾವನೆ ಬೇರೂರಿದ್ದರಲ್ಲಿ ಆಶ್ಚರ್ಯವಿಲ್ಲ. ನಮ್ಮಾಳ್ವಾರ್ ಅವರ ಅವತಾರ ಸ್ಥಳವಾದ ಆಳ್ವಾರ್ ತಿರುನಗರಿಯೇ ಈ ಮಹಾತ್ಮರಿಗೂ ಜನ್ಮಪವಿತ್ರ ಕ್ಷೇತ್ರವಾದ್ದರಿಂದ ಇವರಿಗೆ ಮತ್ತಷ್ಟು ಗೌರವ ಸಂದಿತು. ಮಣವಾಳಮಾಮುನಿಗಳು ಆಚಾರ್ಯಪ್ರಪತ್ತಿಗೆ ಹೆಚ್ಚು ಒತ್ತುಕೊಟ್ಟರು. ಆಚಾರ್ಯನ ಮೂಲಕವೇ ಪರಮಾತ್ಮನ ಲಾಭ ಎಂಬ ತತ್ವವನ್ನು ತಮ್ಮ ಹಿಂದಿನವರು ಹೇಳಿದ್ದನ್ನು ಘಂಟಾಘೋಷವಾಗಿ ಸಾರಿ ಆಚಾರ್ಯಪ್ರಪತ್ತಿಯಲ್ಲಿ ಅನುಮಾನ ತೋರಿಸಿದ ಜನರಿಗೆ ಅಂಕುಶವಾದರು. ನಮ್ಮಾಳ್ವಾರ್ ಹೀಗೆ ಪರಾಂಕುಶರಾದರೋ ಹಾಗೆ ಮಣವಾಳಮಾಮುನಿಗಳೂ ಶ್ರೀ ವೈಷ್ಣವ ತತ್ವಕ್ಕೆ ದ್ವಂದ್ವವನ್ನುಂಟುಮಾಡಿದ ಜನರಿಗೆ ಪರಾಂಕುಶರಾಗಿ ಮೆರೆದರು. ಆಳ್ವಾರುಗಳ ಸೂಕ್ತಿಗಳಲ್ಲಿ ಅನಾದರಣೆ ತೋರಿಸಿದ ಜನರಿಗೆ ಸಿಂಹಸದೃಶರಾದರು. ಭಗವದ್ವಿಷಯ ಪರಂಪರೆಯನ್ನು ಮುಂದುವರೆಯಲು ಕಾರಣರಾದರು.

ಹೀಗೆ ಆಚಾರ್ಯ ಪ್ರಪತ್ತಿಯನ್ನು ಎತ್ತಿಹಿಡಿದ ಇವರು ಆ ದಿವ್ಯ ತತ್ವವನ್ನು ತಮ್ಮ ನಾಲ್ಕು ಸ್ತೋತ್ರರತ್ನಗಳಾದ, ಯತಿರಾಜ ವಿಂಶತಿ, ಉಪದೇಶ ರತ್ತಿನಮಾಲೆ, ತಿರುವಾಯ್ಮೊಳಿನೂತ್ತಂದಾದಿ ಮತ್ತು ಆರ್ತಿಪ್ರಬಂಧಗಳಲ್ಲಿ ಸಾರಿ ಸಾರಿ ಹೇಳಿ ಶ್ರೀ ವೈಷ್ಣವನಿಗೆ ಆಚಾರ್ಯಪ್ರಪತ್ತಿಯೇ ಮೋಕ್ಷ ಸಾಧನೆಗೆ ಉಪಾದೇಯ. ಆಚಾರ್ಯ ಮತ್ತು ಅವರ ಸೂಕ್ತಿಗಳನ್ನು ಅನುಸಂಧಾನ ಮಾಡಿದವನನ್ನು ಪರಮಾತ್ಮನು ತಾನೇ ಬಂದು ಕೈಹಿಡಿದು ತನ್ನೆಡೆಗೆ ಒಯ್ಯುತ್ತಾನೆ ಎಂದು ವ್ಯಾಸರು "ಸತ್ಯಂ ಸತ್ಯಂ ಪುನಸ್ಸತ್ಯಂ ಉದ್ಧೃತ್ಯ ಭುಜಮುಚ್ಚತೇ ವೇದ ಶಾಸ್ತ್ರಾತ್ ಪರಂನಾಸ್ತಿ ನದೈವಂ ಕೇಶವಾತ್ಪರಂ" ಎಂದು ನಿರ್ಭಿಡೆಯಿಂದ ಸಾರಿದಂತೆ ಇವರು ಸರ್ವತಂತ್ರ ಸ್ವತಂತ್ರರಾಗಿ ತಮ್ಮದೇ ಆದ ವಾಕ್ಸರಣಿಯಲ್ಲಿ ಸಾರಿ ಕೀರ್ತಿ ಭಾಜನರಾಗಿದ್ದಾರೆ. ಶ್ರೀ ವೈಷ್ಣವಲೋಕದಲ್ಲಿ ತಮ್ಮದೇ ಆದ ಸ್ಥಾನವನ್ನು ಹೊಂದಿ ಅಜರಾಮರರಾಗಿ ಬೆಳಗಿದ್ದಾರೆ.

ಮಣವಾಳ ಮಾಮುನಿಗಳ ಕಾಲಕ್ಷೇಪವೆಂದರೆ ಎಲ್ಲರನ್ನೂ ಮಂತ್ರಮುಗ್ಧರನ್ನಾಗಿ ಮಾಡುವ ಶಕ್ತಿ ಅದಕ್ಕಿದ್ದಿತು. ಅವರು ಎಷ್ಟೊಂದು ಚೆನ್ನಾಗಿ ವ್ಯಾಖ್ಯಾನ ಮಾಡುತ್ತಿದ್ದರೆಂದರೆ ಅವರ ಶಿಷ್ಯರು ಅವರನ್ನು ಬೇಡಿಕೊಂಡರಂತೆ "ಆಚಾರ್ಯ ನಾಲಾಯಿರ ದಿವ್ಯಪ್ರಬಂಧಗಳಿಗೆ ಈವರೆಗೂ ವ್ಯಾಖ್ಯಾನ ಬರೆದಿರುವವರ ಸರಣಿಗಿಂತ ನಿಮ್ಮ ವ್ಯಾಖ್ಯಾನ ಮಾಡುವ ಶೈಲಿ ಅತ್ಯಂತ ಆಕರ್ಷಣೀಯವಾಗಿದೆ. ಅವುಗಳನ್ನೆಲ್ಲಾ ನಾವು ನಾಶಪಡಿಸಿಬಿಡುತ್ತೇವೆ. ನೀವೇ ಹೊಸದಾಗಿ ಎಲ್ಲಕ್ಕೂ ವ್ಯಾಖ್ಯಾನ ಅನುಗ್ರಹಿಸಬೇಕು" ಎಂಬುದಾಗಿ ಆಚಾರ್ಯರ ಸ್ವಭಾವ ಅತ್ಯಂತ ಮೃದು. ಇತರರ ಮನಸ್ಸನ್ನು ನೋಯಿಸುವಂತೆ ಒಮ್ಮೆಯೂ ತಮ್ಮ ವ್ಯಾಖ್ಯಾನ ಕಾಲದಲ್ಲಿ ಮಾತನಾಡಲಿಲ್ಲ. ತಮ್ಮ ಪಕ್ಷವನ್ನು ಮಂಡಿಸದೇ ಕಾದವರೂ ಕೂಡ ಪ್ರತಿಪಕ್ಷಕ್ಕೆ ನೋವುಂಟಾಗದಂತೆ ವಾದ ಮಾಡುತ್ತಿದ್ದುದು ಅವರ ವಿಶೇಷ. ಇದೇ ಗುಣ ಆಚಾರ್ಯ ರಾಮಾನುಜರಲ್ಲೂ ಮೈಗೂಡಿದ್ದುದು ಅವರ ಶ್ರೀ ಭಾಷ್ಯದಿಂದ ತಿಳಿಯುತ್ತದೆ. ಆಚಾರ್ಯರು ತಮ್ಮ ಹಿಂದಿನ ಹಿರಿಯ ವ್ಯಾಖ್ಯಾನಕಾರರಿಗೆ ಅವಮರ್ಯಾದೆ ಮಾಡಲು ಒಪ್ಪಲಿಲ್ಲ. ಅವರ ವ್ಯಾಖ್ಯಾನಗಳೇ ಆಧಾರವಾಗಿರಬೇಕು ಎಂದು ಸ್ಪಷ್ಟವಾಗಿ ಎತ್ತಿಹಿಡಿದು ಅವರೆಲ್ಲರಿಗೂ ಗೌರವ ತೋರಿಸಿದ ಹಿರಿಯ ವ್ಯಕ್ತಿ. ಇವರ ಸ್ತೋತ್ರಗಳಲ್ಲೂ ಈ ವಿನಯವೇ ಕಂಡುಬರುತ್ತದೆ. ವಿನಯ ಸೌಲಭ್ಯಸೌಶೀಲ್ಯಮಾಧುರ್ಯಭರಿತವಾದ ಇವರ ರಚನೆಗಳಲ್ಲಿ ಆಚಾರ್ಯ ಭಕ್ತಿ, ಅವರ ಪ್ರಬಂಧಗಳಲ್ಲಿ ಭಕ್ತಿ ತುಂಬಿದೆ.

ಯತಿರಾಜ ವಿಂಶತಿ ಆಚಾರ್ಯರಾಮಾನುಜರನ್ನು ಕುರಿತ ಅದ್ವಿತೀಯ ಭಕ್ತಿ ಸ್ತುತಿ. ಶ್ರೀ ವೈಷ್ಣವನಿಗೆ ಅತ್ಯಂತ ಪವಿತ್ರ. ನಿತ್ಯಾನುಸಂಧೇಯವಾದ ಶ್ರೀಕೃತಿ. ಇದನ್ನು ಶ್ರೀ ವೈಷ್ಣವನು ದಿನವೂ ಅನುಸಂಧಾನ ನಡೆಸಿ ಆಚಾರ್ಯ ರಾಮಾನುಜರಿಗೂ ಆಚಾರ್ಯ ಮಣವಾಳ ಮಾಮುನಿಗಳಿಗೂ ಭಕ್ತಿ ಕುಸುಮಾಂಜಲಿಯನ್ನು ಅರ್ಪಿಸಿ ಕೃತಾರ್ಥರಾಗುವ ಪರಿಪಾಠಿ ಇಂದಿಗೂ ನಡೆದುಬರುತ್ತಿದೆ. ಇದು ಸಂಸ್ಕೃತದಲ್ಲಿದೆ ಆಪ್ಯಾಯವಾದ ಸರಳ ಶೈಲಿಯಲ್ಲಿದೆ. ಪಾಂಡಿತ್ಯಕ್ಕೇನೂ ಕಡಿಮೆ ಇಲ್ಲ. ಭಕ್ತಿ ಭಾವಪೂರ್ಣ ಎಲ್ಲವೂ ಸಮಾನ ವ್ಯಾಪ್ತಿಯಲ್ಲಿ ಮೆರೆದಿದೆ. ಹೆಸರೇ ಸೂಚಿಸುವಂತೆ ಇದರಲ್ಲಿ ಇಪ್ಪತ್ತು ಶ್ಲೋಕಗಳಿವೆ. ಯತಿರಾಜ ಎಂದರೆ ರಾಮಾನುಜಾಚಾರ್ಯರು. ಅವರನ್ನು ಕುರಿತ ಸ್ತೋತ್ರ ಎಂದು ಅರ್ಥ.

ರಾಮಾನುಜರನ್ನು ಕುರಿತ ಪ್ರಾರ್ಥನೆಯಿಂದ ಸ್ತೋತ್ರ ಆರಂಭವಾಗುತ್ತದೆ. ರಾಮಾನುಜರನ್ನು "ಪ್ರಪನ್ನ ಜನ ಚಾತಕಾಂಬುಧ್ಯಂ" ಎಂದು ಆಚಾರ್ಯರು ಸಂಬೋಧಿಸಿದ್ದಾರೆ.

ಮೊದಲಿನ ನಾಲ್ಕು ಶ್ಲೋಕಗಳಲ್ಲಿ ಅವರ ವಿಚಾರ, ಅವರ ಹಿರಿಮೆ ಮಹಿಮೆಗಳ, ಅವರ ಶಿಷ್ಯರುಗಳು. ಇವರೆಲ್ಲರ ವಿಚಾರಗಳೂ ವಿವರಿತವಾಗಿವೆ. ಮುಂದಿನ ನಾಲ್ಕು ಶ್ಲೋಕಗಳಲ್ಲಿ ಅಂತಹ ಆಚಾರ್ಯರನ್ನು ನಾನು ಧ್ಯಾನಿಸುತ್ತೇನೆ ಅವರು ನನ್ನನ್ನು ಉದ್ಧಾರ ಮಾಡಲಿ ಎಂದು ವಿಜ್ಞಾಪಿಸುತ್ತಾರೆ. ನಂತರದ ಮೂರು ಶ್ಲೋಕದಲ್ಲಿ ತಮ್ಮ ಅವಿವೇಕಕ್ಕೆ ಮರುಗುತ್ತಾರೆ. ಅಂತಹ ಆಚಾರ್ಯ ಆಶ್ರಯಿಸದೆ ಲೋಕವ್ಯವಹಾರದಲ್ಲಿ ಪ್ರಾಪಂಚಿಕ ವಿಷಯಗಳಲ್ಲಿ ನಿಮಗ್ನನಾಗಿ ಮೂರ್ಖನಾಗಿಬಿಟ್ಟೆ ಎಂದು ತಮ್ಮನ್ನು ಹಳಿದುಕೊಳ್ಳುವ ವರ್ಣನೆ ಹೃದಯಸ್ಪರ್ಶಿಯಾಗಿದೆ.

ನಂತರದ ಎರಡು ಶ್ಲೋಕಗಳಲ್ಲಿ ಇಂತಹ ಪಾಪಿಯಾದ ತನಗೆ, ಮೋಹಾಂಧಕಾರದಲ್ಲಿಬಿದ್ದ ತನಗೆ ಅಂತಹ ಗುರುವನ್ನು ಆಶ್ರಯಿಸುವ ಅರ್ಹತೆಯಾದರೂ ಇರುವುದೇ ಎಂಬ ಜಿಜ್ಞಾಸೆ, ತಿರಸ್ಕಾರ ಏರ್ಪಡುತ್ತದೆ.

ಆದರೂ ಪಶ್ಚಾತ್ತಾಪದೊಡನೆ ನಿನಗೆ ಶರಣಾಗತನಾಗಿ ಬಂದಿದ್ದೇನೆ . ನೀನೇ ನನಗೆ ಗತಿ, ನನಗೆ ದಾರಿದೀಪ ಎಂದು ಶರಣಾಗತಿ ನಡೆಸಲು ಮುಂದಾಗುತ್ತಾರೆ ಮುಂದಿನ ನಾಲ್ಕು ಸ್ತೋತ್ರಗಳಲ್ಲಿ ಮುಂದಿನ ಮುಕ್ತಾಯದ ಮೂರು ಶ್ಲೋಕಗಳಲ್ಲಿ ಆಚಾರ್ಯರ ಪಾದಗಳನ್ನು ಗಟ್ಟಿಯಾಗಿ ಹಿಡಿದುಕೊಂಡು ನನ್ನನ್ನು ನನ್ನ ಅವಿವೇಕವನ್ನು ತಪ್ಪುಗಳನ್ನೂ ಕ್ಷಮಿಸಿ ನನಗೆ ನೀವೇ ದೇವಸೋಪಾದಿಯಲ್ಲಿ ನಿಂತುಕೊಂಡು ಕಾಪಾಡಬೇಕು ಎಂದು ಬಿನ್ನಹ ಮಾಡುವ ಶರಣಾಗತಿಯ ಪರಮಾವಧಿ ಎತ್ತಿಹಿಡಿಯಲ್ಪಟ್ಟಿದೆ.

ಹೀಗೆ ಮೆಟ್ಟಲು ಮೆಟ್ಟಲಾಗಿ ಭಕ್ತಿಯು ಮೇಲೇರುತ್ತಾ ಬಂದಿರುವ ಸಂವಿಧಾನ ರಮಣೀಯವಾಗಿ

ಮೆರೆಯುತ್ತವೆ, ನಮ್ಮನ್ನು ಮೈಮರೆಸುತ್ತವೆ. ಮಣವಾಳ ಮಾಮುನಿಗಳ ಬದಲಿಗೆ ನಾವೇ ವಿಜ್ಞಾಪನ ಮಾಡುತ್ತಿರುವೆವೋ ಎಂಬ ತಾದಾತ್ಮ್ಯಭಾವ ನಮ್ಮಲ್ಲಿ ಮೂಡುತ್ತದೆ. ಕೃತಿಯ ಸೊಬಗು ಸಾರ್ಥಕತೆ ಓದುಗನನ್ನು ಕವಿಯೊಡನೆ ಒಂದು ಮಾಡುವುದರಲ್ಲಿ ತಾನೇ ಇರುವುದು. ಅದರಿಂದಲೇ ತಾನೆ ಕಾವ್ಯ ಸಾರ್ಥಕತೆಯನ್ನು ಹೊಂದುತ್ತದೆ. ಮಣವಾಳ ಮಾಮುನಿಯವರ ಈ ಕೃತಿಯಲ್ಲಿ ರಾಮಾನುಜರ ಗುಣ ವೈಭವವನ್ನು ಸುಸ್ಪಷ್ಟವಾಗಿ ಪ್ರಕಟಿಸುತ್ತದೆ.

ಆಚಾರ್ಯರ ಮಿಕ್ಕ ಮೂರು ಕೃತಿಗಳು ತಮಿಳು ಭಾಷೆಯಲ್ಲಿವೆ. ಆಚಾರ್ಯರ ಎರಡನೇ ಕೃತಿಯಾದ ಉಪದೇಶ ರತ್ತಿನ ಮಾಲೆ ಶ್ರೀ ವೈಷ್ಣವನಿಗೆ ಅತ್ಯಾಪ್ತವಾದ ಕೃತಿ. ಅದು ಶ್ರೀ ವೈಷ್ಣವ ಸಂಪ್ರದಾಯ ಹೇಗೆ ಬೆಳೆದುಬಂದಿತು, ಎಂಬುದನ್ನು ಒಂದು ಕೋಶದೋಪಾದಿಯಲ್ಲಿ ವಿವರಿಸುತ್ತದೆ. ಈ ಕೋಶಗ್ರಂಥಕ್ಕೆ ಅದರಿಂದಲೇ ಅತಿಶಯ ಮರ್ಯಾದೆ ಸಲ್ಲುವುದು. ಶ್ರೀ ವೈಷ್ಣವ ಭಕ್ತಿಪಂಥಕ್ಕೆ ರೂಪುರೇಷೆಯನ್ನಿತ್ತ ಆಳ್ವಾರುಗಳು ಯಾರು ಯಾರು, ಅವರು ಎಂದು ಎಂದು ಅವತರಿಸಿದರು. ಅವರ ಪ್ರಶಸ್ತಿಯೇನು. ಅವರ ಅವತಾರ ಸ್ಥಳಗಳು ಯಾವುವು. ಅವರಲ್ಲಿಯೂ ಯಾವ ಯಾವ ಆಳ್ವಾರ್‌ಗಳು ಅತ್ಯಂತ ಹಿರಿಮೆಯ ಸ್ಥಾನ ಗಳಿಸಿದ್ದಾರೆ. ಅಂತಹ ಮಹಿಮೆಗಳೇನು. ರಾಮಾನುಜರು ಇವರ ಪ್ರಬಂಧಗಳಿಂದ ಉತ್ತೇಜಿತರಾದದ್ದೇಕೆ, ಅವರ ಪಂಥವನ್ನು ಪರಮಾತ್ಮನೇ ಮೆಚ್ಚಿ "ಎಂಬೆರುಮಾನಾರ್‌ದರ್ಶನಮ್" ಎಂದು ಕರೆಯಲು ಕಾರಣ. ಇದಕ್ಕೆ ಮೂಲಕಾರಣವಾದ ತಿರುವಾಯ್ಮೊಳಿಯನ್ನು ವ್ಯಾಖ್ಯಾನ ಮಾಡಿದ ಆಚಾರ್ಯರು, ಆ ವ್ಯಾಖ್ಯಾನಗಳಾವುವು, ನಾಲಾಯಿರ ದಿವ್ಯಪ್ರಬಂಧಗಳ ಇತರ ವ್ಯಾಖ್ಯಾನಗಳು ಯಾವುವು. ಈ ಆಚಾರ್ಯರು ಪರಮಾತ್ಮನಿಗೆ ಆಪ್ತರಾಗಿ ಎಲ್ಲರೂ, ನಂಜೀಯರ್ ನಂಪಿಳ್ಳೈ ಇತ್ಯಾದಿಯಾಗಿ ಕರೆಸಿಕೊಂಡುದರ ಹಿನ್ನೆಲೆ. ತಿರುವಾಯ್ಮೊಳಿಯ ವಿಸ್ತಾರವಾದ ವ್ಯಾಖ್ಯಾನ ಮುಪ್ಪತ್ತಾರಾಯಿರಪ್ಪಡಿಯು ಹೀಗೆ ಶಿಷ್ಯಪರಂಪರೆಯಿಂದ ರಕ್ಷಿಸಲ್ಪಟ್ಟು ಬೆಳಕಿಗೆ ಬಂದಿದ್ದು. ಪಿಳ್ಳೈಲೋಕಾಚಾರ್ಯರ ವಿಶೇಷ - ಅವರ ಶ್ರೀ ವಚನಭೂಣವಾದ ಮಹತ್ವ, ಆಚಾರ್ಯ ಶಿಷ್ಯರ ಸ್ಥಾನಮಾನಗಳು. ಆಚಾರ್ಯ ಪ್ರಪತ್ತಿಯಲ್ಲಿ ಶಿಷ್ಯನು ಆಸಕ್ತಿ ತೋರಿದಲ್ಲಿ ಮಧ್ಯದ ಪುರುಷಕಾರವನ್ನೂ ಪರಮಾತ್ಮನು ಅಲಕ್ಷಿಸಿ ತಾನೇ ಬಂದು ಕಾಪಾಡುವ ಆತನ ಅವ್ಯಾಜಕರುಣೆಯ ಮಹತ್ವ. ಆಚಾರ್ಯನ ಆಳ್ವಾರುಗಳ ಬಗ್ಗೆ ಅವರ ಪ್ರಬಂಧಗಳ ಬಗ್ಗೆ ಅಲಕ್ಷ್ಯ ಅನಾದರಿಗೆ ತೋರಿಸಕೂಡದು ಹೀಗೆ ತೋರಿಸಿದಲ್ಲಿ ಪರಮಾತ್ಮನೂ ಅವನನ್ನು ಅನುಗ್ರಹಿಸುವುದಿಲ್ಲ, ಒಳ್ಳೆಯವರ ಸಂಗದ ಮಹತ್ವ ಕೆಟ್ಟವರ ಜೊತೆ ಇರುವುದರ ದುಷ್ಪರಿಣಾಮ ಇವುಗಳನ್ನು ಅಧ್ಯಾಯಕ ಶೈಲಿಯಲ್ಲಿ ಆಚಾರ್ಯರು ವಿವರಿಸಿದ್ದಾರೆ.

ಒಟ್ಟಿನಲ್ಲಿ ಇದೊಂದು ಮೇರುಕೃತಿ. ಶ್ರೀ ವೈಷ್ಣವನು ದಿವ್ಯಪ್ರಬಂಧಗಳ ಸಾಲಿಗೆ ಇದನ್ನು ಏರಿಸಲಾಗಿದೆ ಎಂದಾಗ ಆಚಾರ್ಯರ ಮಹಿಮೆಯ ಅರಿವಾದೀತು. ಈ ಪ್ರಬಂಧವನ್ನು ಅನುಸಂಧಾನ ನಡೆಸದೆ ನಾಲಾಯಿರ ದಿವ್ಯಪ್ರಬಂಧಗಳ ಅನುಸಂಧಾನ ಕಾರ್ಯ ಮುಕ್ತಾಯಗೊಳ್ಳದು ಎಂದಾಗ ಶ್ರೀ ವೈಷ್ಣವರು ಈ ದಿವ್ಯಪ್ರಬಂಧಕ್ಕೆ ನೀಡಿರುವ ವಿಶಿಷ್ಟಸ್ಥಾನದ ಅರಿವಾದೀತು.

ಈ ಪ್ರಬಂಧವನ್ನು ರಚಿಸಲು ಕಾರಣವೊಂದಿದೆ. ಶ್ರೀ ವೈಷ್ಣವರಲ್ಲಿ ರಾಮಾನುಜರ ಸಿದ್ಧಾಂತವನ್ನು ಎರಡು ಬಗೆಯಲ್ಲಿ ವ್ಯಾಖ್ಯಾನಿಸಿ ಆಳ್ವಾರ್‌ಗಳೂ ಅವರ ದಿವ್ಯ ಪ್ರಬಂಧಗಳ ಬಗ್ಗೆ ಅವಹೇಳನಕರವಾಗಿ ಕೆಲವರು ವರ್ತಿಸಿದಾಗ ಪಿಳ್ಳೈಲೋಕಾಚಾರ್ಯರ ಶ್ರೀ ವಚನ ಭೂಷಣ, ಅಳಹಿಯ ಮಣವಾಳರ ಅವರ ಆಚಾರ್ಯಹೃದಯ ಮತ್ತು ಪಿಳ್ಳೈಲೋಕಾಚಾರ್ಯರ ಅಷ್ಟಾದಶ ರಹಸ್ಯಗಳು ಶ್ರೀ ವೈಷ್ಣವರಲ್ಲಿ ಅರಿವು ಮೂಡಿಸಲು ಸೃಷ್ಟಿಗೊಳ್ಳಬೇಕಾಯಿತು. ಆ ಗುಂಪಿಗೆ ಈ ಉಪದೇಶ ರತ್ತಿನ ಮಾಲೆಯೂ ಸೇರತಕ್ಕ ಕೃತಿಯಾಗಿ ಮೆರೆಯಿತು. ಇದು ಈ ಪ್ರಬಂಧದ ವೈಭವ.

ಆಚಾರ್ಯರಿಗೆ ನಮ್ಮಾಳ್ವಾರ್ ಅವರನ್ನೂ ಅವರ ಭಕ್ತಿಮಾರ್ಗವನ್ನೂ ಕಂಡರೆ ಅತ್ಯಂತ ಭಕ್ತಿ, ಶ್ರದ್ಧೆ ಉತ್ಸಾಹ. ಅದರಿಂದಲೇ ಅವರನ್ನು ಉಪದೇಶ ರತ್ತಿನಮಾಲೆಯಲ್ಲಿ ಪ್ರಶಂಸಿಸಿದ್ದಾರೆ.

ಉಂಟೋ ವೃಷಭದ
ವಿಶಾಖೆಯ ನಕ್ಷತಿರಕೆ ಸಮ
ಉಂಟೋ ಶಡಗೋಪರಿಗೆ
ಸಮರೊಬ್ಬರ್, ಇನ್ನುಂಟೋ
ತಿರುವಾಯ್ಮೊಳಿಗೆ ಸಮ, ಭೂಲೋಕದಲಿ ತೆಂಕ
ಕುರುಗೂರಿ ಗೊಪ್ಪವಾ ಊರು ಮತ್ತುಂಟೋ?

ನಿಜ. ಅವರಿಗೆ ಸಮನಾದ ವ್ಯಕ್ತಿ ಇನ್ನೊಬ್ಬರಿಲ್ಲ ತಿರುವಾಯ್ಮೊಳಿಗೆ ಸಮ ದೇರೊಂದಿಲ್ಲ. ಆಚಾರ್ಯರಿಗೆ ಅದರ ವ್ಯಾಖ್ಯಾನ ಮಾಡುವುದು ಎಂದರೆ ಅತ್ಯಂತ ಇಷ್ಟವಾದ ಕೆಲಸ. ಅವರ ವಿಶದವಾಕ್ ಶೈಲಿಯಲ್ಲಿ ಕಾಲಕ್ಷೇಪಕ್ಕೆ ತೊಡಗಿದರೆ ಶ್ರೋತೃಗಳು ತಲ್ಲೀನರಾಗಿ ಕೇಳುತ್ತಿದ್ದರಂತೆ! ಅಂತಹ ಅದ್ಭುತ ಕಾಲಕ್ಷೇಪ ಕೇಳಲು ಸಾಕ್ಷಾತ್ ರಂಗನಾಥನೇ ಬರುತ್ತಿದ್ದಾನಂತೆ ಒಬ್ಬ ಬಾಲಕನಂತೆ, ಕಾಲಕ್ಷೇಪ ಮುಗಿದನಂತರ ಆತ ಮಣವಾಳಮಾಮುನಿಗೆ ಆಚಾರ್ಯಸ್ಥಾನ ಕಲ್ಪಿಸಿ ಅವರ ಮೇಲೆ ತನಿಯನ್ ಅನುಗ್ರಹಿಸಿದನಂತೆ

"ಶ್ರೀಶೈಲೇಶ ದಯಾಪಾತ್ರಂ
ಧೀ ಭಕ್ತ್ಯಾದಿ ಗುಣಾರ್ಣವಂ
ಯತೀಂದ್ರ ಪ್ರವಣಂ ವಂದೇ
ರಮ್ಯಜಾಮಾತರಂ ಮುನಿಂ"

ಎಂಬುದಾಗಿ. ಇಂತಹ ಭಾಗ್ಯ ಯಾರಿಗೆ ತಾನೇ ಉಂಟು. ಹೀಗೆ ವಿಶದವಾಗಿ ಜನರ ಮನ ಮುಟ್ಟುವ ಶೈಲಿಯಲ್ಲಿ ವ್ಯಾಖ್ಯಾನ ಮಾಡಬಲ್ಲ ಸಾಮರ್ಥ್ಯ ಹೊಂದಿದ ಆಚಾರ್ಯರು ಸುಲಲಿತವಾಗಿ ಸಂಗ್ರಹವಾಗಿ ತಿರುವಾಯ್ಮೊಳಿಯ ಸಾರವನ್ನೂ ತಿಳಿಸಬಲ್ಲ ಸಾಮರ್ಥ್ಯವನ್ನೂ ಸಹ ಹೊಂದಿದ್ದರು ಎಂಬುವುದು ಅವರ ತಿರುವಾಯ್ಮೊಳಿ ನೂತ್ತಂದಾದಿ ಪ್ರಬಂಧದಿಂದ ನಮಗೆ ಕಂಡುಬರುತ್ತದೆ. ಇದರಲ್ಲಿ ಹಲವು ವಿಶೇಷಗಳಿವೆ.

ನಮ್ಮಾಳ್ವಾರ್ ಅವರ ತಿರುವಾಯ್ಮೊಳಿ ಸಾವಿರ ಸಂಖ್ಯೆಯ ಪಾಶುರಗಳ ದಿವ್ಯಪ್ರಬಂಧ. ಅದನ್ನು ನಮ್ಮಾಳ್ವಾರ್ ಅವರು ಪದಿಕ ಪದಿಕವಾಗಿ ವಿಂಗಡಿಸಿದ್ದಾರೆ. ಹತ್ತು ಪಾಶುರಗಳ ಗುಂಪಿಗೆ ಪದಿಕ ಎಂದು ಅರ್ಥ. ಎಂದಾಗ ನೂರು ಪದಿಕಗಳಿಂದ ತಿರುವಾಯ್ಮೊಳಿ ದಿವ್ಯಪ್ರಬಂಧ ಕೂಡಿದೆ ಎಂದಾಯಿತಲ್ಲವೆ. ಎಲ್ಲ ಪಾಶುರಗಳೂ ಅಂತ್ಯಾದಿ ರಚನೆಯವು ಎಂದರೆ ಒಂದು ಪಾಶುರದ ಕೊನೆಯ ಪಾದವನ್ನೇ ಮುಂದಿನ ಪಾಶುರದ ಮೊದಲ ಪದವನ್ನಾಗಿ ಬಳಸಿಕೊಂಡಿದ್ದಾರೆ ಎಂದು ಅರ್ಥ. ಆಚಾರ್ಯರು ಪ್ರತಿಯೊಂದು ನಮ್ಮಾಳ್ವಾರ್‌ರ ಪದ್ಯಕ್ಕೂ ಒಂದೊಂದು ಪಾಶುರವನ್ನು ರಚಿಸಿ ತಿರುವಾಯ್ಮೊಳಿ ನೂತ್ತಂದಾದಿಯಲ್ಲಿ ನೂರು ಪಾಶುರಗಳನ್ನು ತುಂಬಿದ್ದಾರೆ. ಎಲ್ಲವೂ ಇಲ್ಲಿಕೂಡ ಅಂತ್ಯಾದಿರಚನೆಯೆ. ಇನ್ನೊಂದು ವಿಶೇಷವೇನೆಂದರೆ ನಮ್ಮಾಳ್ವಾರರ ಪದಕದ ಮೊದಲಿನ ಪಾದ, ಕಡೆಯಪದಗಳು ನೂತ್ತಂದಾದಿಯ ಪಾಶುರದ ಮೊದಲಪಾದ ಕಡೆಯಪದವಾಗಿ ಜೋಡಿಸಲ್ಪಟ್ಟಿವೆ. ಪದಿಕಗಳಲ್ಲಿ ಬರುವ ಮುಖ್ಯಪದಗಳನ್ನೂ ತಮ್ಮ ಪಾಶುರಗಳಲ್ಲಿ ಬಳಸಿ ಅರ್ಥ ಸೃಷ್ಟಿ ನೀಡಿರುವುದು ವಿಶೇಷ. ಪ್ರತಿಪದಿಕಗಳಲ್ಲೂ ಪ್ರತಿಪಾದಿತವಾಗಿರುವ ವಸ್ತು ವಿಶೇಷ ಈ ನೂತ್ತಂದಾದಿಯಲ್ಲಿನ ಪ್ರತಿ ಪಾಶುರಗಳಲ್ಲಿ ಪ್ರತಿಫಲಿತವಾಗಿದೆ. ಪ್ರತಿಪಾಶುರದಲ್ಲೂ ನಮ್ಮಾಳ್ವಾರ್‌ರವರ ಪವಿತ್ರನಾಮ ಬಂದೇಬರುತ್ತದೆ.

ಇಂತಹ ರಚನೆ ಸಾಮಾನ್ಯನಿಂದ ಆಗತಕ್ಕದ್ದಲ್ಲ. ಇದಕ್ಕೆ ಆಳವಾದ ಪಾಂಡಿತ್ಯ ತಿರುವಾಯ್ಮೊಳಿಯ

ಗಾಢವಾದ ಪರಿಚಯ, ಅಭ್ಯಾಸ, ಉನ್ನತವಾದ ಕವಿತಾರಚನೆಯಸಿದ್ಧಿ - ಇವೆಲ್ಲವೂ ಅತ್ಯವಶ್ಯಕ. ಆಚಾರ್ಯರು ಇವೆಲ್ಲದರಲ್ಲೂ ಸಿದ್ಧಹಸ್ತರಾಗಿರುವುದರಿಂದಲೇ ಈ ನೂತ್ತಂದಾದಿಯನ್ನು ಯಶಸ್ವಿಯಾಗಿ ರಚಿಸಿದ್ದಾರೆ ಎನ್ನುವುದರಲ್ಲಿ ಎರಡು ಮಾತೇ ಇಲ್ಲ. ಆದ್ದರಿಂದಲೇ ಇದಕ್ಕೂ ಪ್ರಬಂಧಪ್ರಪಂಚದಲ್ಲಿ ವಿಶಿಷ್ಟಸ್ಥಾನ ದೊರಕಿದೆ. ಮೇಲುಕೋಟೆಯಲ್ಲಿ ಮಣವಾಳ ಮಾಮುನಿ ಮತ್ತು ಪಿಳ್ಳೈ ಲೋಕಾಚಾರ್ಯರ ಮಾಸ ತಿರುನಕ್ಷತ್ರೋತ್ಸವದ ದಿವಸ ಸಾಯಂಕಾಲ ಚೆಲುವರಾಯಸ್ವಾಮಿಯ ಆಚಾರ್ಯರ ಸನ್ನಿಧಿಗಳಿಗೆ ಬಿಜಮಾಡಿಸಿ ಆ ಆಸ್ಥಾನದಲ್ಲಿ ತಿರುವಾಯ್ಮೊಳಿ ನೂತ್ತಂದಾದಿಯ ಸೇವೆ, ಶಾತ್ತುಮೊರೆಗಳು ನಡೆಯುವ ಆಚರಣೆ ಇಂದಿಗೂ ನಡೆಯುತ್ತ ಬಂದಿದೆ.

ಆಚಾರ್ಯರ ನಾಲ್ಕನೆಯ ಸ್ತೋತ್ರರತ್ನ "ಆರ್ತಿಪ್ರಬಂಧ" ಇದು ಅವರ ಚರಮ ಕೃತಿ. ಹಂಸವು ತನ್ನ ಅಂತಿಮ ಕಾಲದಲ್ಲಿ ಹೇಗೆ ಸುಸ್ವರದಲ್ಲಿ ಗಾನ ಮಾಡಿ ದೇಹ ತ್ಯಾಗಮಾಡುವುದೋ ಅದೇ ರೀತಿ ಈ ಸ್ತೋತ್ರವನ್ನು ರಚಿಸಿದನಂತರ ಆಚಾರ್ಯರು ಪರಮಪದವನ್ನು ಸೇರಿದರು. ಆದ್ದರಿಂದ ಇದು ಆಚಾರ್ಯರ ಹಂಸಗೀತೆ (Swan Song) ಎಂದು ಪರಿಗಣಿಸಲ್ಪಟ್ಟಿದೆ.

ಆಚಾರ್ಯ ಧೆನ್ನು ಘಣಿಯಿಂದ ತೊಂದರೆ ಅನುಭವಿಸುತ್ತಾ ರಾಮಾನುಜರನ್ನು ಶೀಘ್ರವಾಗಿ ಅವರ ಪಾದಾರವಿಂದಗಳಲ್ಲಿ ತಮ್ಮನ್ನು ಸೇರಿಸಿಕೊಳ್ಳುವಂತೆ ಆರ್ದ್ರರಾಗಿ ಬಿನ್ನವಿಸಿಕೊಂಡರಂತೆ ಆ ಹೃದಯಸ್ಪರ್ಶಿಯಾದ ಕಾವ್ಯಭಾವ ಈ ಪ್ರಬಂಧದಲ್ಲಿ ಬಹು ಸಹಜವಾಗಿ ಮೂಡಿಬಂದಿದೆ. ಆಚಾರ್ಯ ಶರಣಾಗತಿಯ ಅತ್ಯುಚ್ಚ ನಿಲುವನ್ನು ನಾವಿಲ್ಲಿ ದರ್ಶಿಸುತ್ತೇವೆ. ಇಲ್ಲಿನ ವಿಜ್ಞಾಪನೆ ನಡೆಸುವ ಸಂದರ್ಭದಲ್ಲಿ ಅತಿ ಮನೋಹರವಾದ ಉಪಮಾನಗಳನ್ನು ಆಚಾರ್ಯರು ನೀಡುತ್ತಾರೆ. ಅವುಗಳಲ್ಲಿ ಕೆಲವನ್ನಾದರೂ ಉದಹರಿಸದಿದ್ದರೆ ಮನಸ್ಸು ಒಪ್ಪುವುದಿಲ್ಲ.

ಆಚಾರ್ಯನ ಶರಣಾಗತಿಯನ್ನು ಮಾಡುವ ಮನಸ್ಸನ್ನು ಒಂದು ನಿಮಿಷವೂ ಬಿಡದವರ ಪಾದಗಳಿಗೆ ದೇವತೆಗಳೇ ನಮಸ್ಕರಿಸುತ್ತಾರಲ್ಲವೆ ರಾಮಾನುಜ.

ತಂದೆ, ತಾಯಿ, ಮಕ್ಕಳು, ಹೆಂಡತಿ ಐಶ್ವರ್ಯ ಸಮಸ್ತರೂ ನೀನೇ ನನಗೆ. ಆದರೆ ನನ್ನನ್ನೇಕೆ ನಿನ್ನ ಪಾದಗಳಲ್ಲಿ ಸೇರಿಸಿಕೊಳ್ಳದೆ ಸತಾಯಿಸುತ್ತಿರುವೆ ರಾಮಾನುಜ. ನಾನು ಅಂತಹಸ್ಥಿತಿಗೆ ಅನರ್ಹನೇ.

ಈ ದೇಹವೆಂಬ ಕಾರಾಗೃಹದಿಂದ ಎಂದಿಗೆ ಬಿಡುಗಡೆ, ಎಂದು ನಾನು ಪರಮಪದ ಆನಂದವನ್ನು ಅನುಭವಿಸುವುದು. ನನ್ನನ್ನು ಅಂತಹ ಅಲೌಕಿಕ ಸಂತೋಷಕ್ಕೆ ಕೊಂಡೊಯ್ಯುವುದು ನಿನ್ನ ಜವಾಬ್ದಾರಿ ಅಲ್ಲವೆ ಯತಿರಾಜ.

ತಂದೆಯಾದವನು ಊಟಕ್ಕೆ ಕುಳಿತಾಗ ತನ್ನ ಜೊತೆಗೆ ತನ್ನ ಮಗನಿಲ್ಲದಿದ್ದರೆ ತಾನು ತಿನ್ನುವ ಅನ್ನದಲ್ಲಿ ರುಚಿ ಕಾಣುತ್ತಾನೆಯೇ? ಹೇಳು ಯತಿರಾಜ. ನಾನಿಲ್ಲದೆ ನೀನು ಹೇಗೆ ಊಟ ಮಾಡಿ ಅದರ ಆನಂದ ಅನುಭವಿಸುವೆ. ಏತಕ್ಕೆಂದರೆ ನೀನು ನನಗೆ ತಂದೆಯಲ್ಲವೆ? ನನ್ನನ್ನು ಕರೆದುಕೋ!

ದೇವಿನೆಲೆ ಹಣ್ಣಾದಂತೆಲ್ಲಾ ಅದರಲ್ಲಿನ ಕಹಿಯು ವೃದ್ಧಿ ಹೊಂದುತ್ತಲೇ ಬರುತ್ತದೆ. ಅದರಂತೆಯೇ ನನ್ನಲ್ಲಿರುವ ಪ್ರಾಕೃತ ದೆಸೆಯಿಂದ ನನ್ನ ದೇಹ ಗಳಿತಗೊಂಡಂತೆಲ್ಲಾ ನನ್ನಲ್ಲಿ ಕೆಟ್ಟ ಗುಣವೆಂಬ ಪದಾರ್ಥವು ವೃದ್ಧಿಯಾಗುತ್ತದೆ. ಎಲೈ ಯತಿರಾಜನೆ ಇದನ್ನು ಬೆಳೆಯಲು ಬಿಡದೆ ನನ್ನನ್ನು ಶ್ರೀಪಾದದಲ್ಲಿ ಸೇರಿಸಿಕೊ.

ಮಗುವಿನ ಖಾಯಿಲೆ ವಾಸಿಯಾಗಲು ತಾಯಿ ತಾನು ಕಹಿ ಔಷಧಿಯನ್ನು ತೆಗೆದುಕೊಳ್ಳುವಂತೆ ನೀನು ನನ್ನ ಉದ್ಧಾರಕ್ಕಾಗಿ ಎಷ್ಟೊಂದು ಕಷ್ಟವನ್ನು ತಳೆಯುತ್ತೀಯ. ನನ್ನ ಜನ್ಮ ಜನ್ಮಗಳಲ್ಲೂ ಹೀಗೆಯೇ ನೀನೂ ನನಗಾಗಿ ಜನ್ಮವೆತ್ತಿ ಕಾಪಾಡುತ್ತಿರುವೆಯಾ ಹೇಳು ಯತಿರಾಜ.

ಮಗುವು ಬಾವಿಯ ಬಳಿಗೋಡಿದರೆ ಜನ ತಾಯಿಯನ್ನಲ್ಲವೆ ನಿಂದಿಸುವುದು. ಹೀಗೆ ಅವಿವೇಕಿಯಾದ ನನ್ನ ವರ್ತನೆಗೆ ನೀನು ನಿಂದನೆಯನ್ನು ತಾಳದೇಕಲ್ಲವೆ. ಆದರೂ ನಿನ್ನ ಮತ್ತು ನನ್ನ ಬಾಂಧವ್ಯವನ್ನು ಹಿರಿದಾಗಿ ಭಾವಿಸಿ ನಿಂದೆಯನ್ನು ಕ್ಷಚಿತ್ತಾಗಿ ತೆಗೆದುಕೊಂಡು ನನ್ನನ್ನು ಉದ್ಧರಿಸುವ ನೀನು ನಿಜವಾಗಿಯೂ ಕರುಣಾಮಯನು ತಾನೆ.

ಮಗುವು ಬಾವಿಗೆ ಬಿದ್ದರೆ ಅದನ್ನು ಕಾಪಾಡಲು ಹಿಂದು ಮುಂದು ನೋಡದೆ ತಾಯಿಯಾದವಳು ಭಾವಿಗೆ ಧುಮುಕಿ ಮಗುವನ್ನು ಕಾಪಾಡುವಂತೆ ನಿನ್ನ ಅವಸ್ಥೆ ನನ್ನನ್ನು ಕುರಿತದ್ದಾಗಿದೆ. ಅಂತಹ ದೇವರಿಗಿಂತ ಮಿಗಿಲಾದ ಕಾರುಣ್ಯ ನಿನ್ನದಲ್ಲವೆ ಯತಿರಾಜ.

ಹೀಗೆಯೇ ಪ್ರಬಂಧ ಆಪ್ಯಾಯಕವಾಗಿ ಸಾಗುತ್ತದೆ. ಅರವತ್ತು ಪಾಶುರಗಳಿಂದ ಕೂಡಿದ ಇದರ ಸ್ವಾರಸ್ಯವನ್ನು ಅನುಸಂಧಾನ ಮಾಡಿಯೇ ಅನುಭವಿಸಬೇಕು. ಯತಿರಾಜರ ಮಹಿಮೆ, ಸಾಧನೆ, ವಿಜಯಗಳನ್ನು ಕುರಿತ ಎರಡು ಮೂರು ಸ್ತೋತ್ರಗಳು ಪ್ರತ್ಯೇಕ ವೃತ್ತಗಳಲ್ಲಿ ಹೆಣೆಯಲ್ಪಟ್ಟು ಓದಲು ಮೆಲುಕುಹಾಕುವಂತೆ ರಮ್ಯವಾಗಿದೆ. ಶ್ರೀ ವೈಷ್ಣವರು ಯತಿರಾಜರ "ವಾಳಿತ್ತಿರುನಾಮ"ದಲ್ಲಿ ಇದನ್ನು ಸೇರಿಸಿಕೊಂಡಿರುವುದು ಅವರ ಮಣವಾಳ ಮಾಮುನಿಗಳ ಮೇಲಿನ ಭಕ್ತಿಯನ್ನು ಸ್ಪಷ್ಟಪಡಿಸುತ್ತದೆ.

ಈ ಆರ್ತಿ ಪ್ರಬಂಧವನ್ನು ರಚಿಸಿ ಆಚಾರ್ಯರು ಅದರಲ್ಲಿ ದೇಡಿಕೊಂಡಂತೆ ಆಚಾರ್ಯರ ಶ್ರೀಪಾದಗಳನ್ನು ಸೇರಿಕೊಂಡರು. ಈ ಕಾರಣದಿಂದ ಶ್ರೀವೈಷ್ಣವರು ಇದನ್ನು ತಮ್ಮ ನಿತ್ಯಾನುಸಂಧಾನ ಕೃತಿಗಳೊಡನೆ ಸೇರಿಸಿಲ್ಲ. ಆದರೂ ಇದಕ್ಕೆ ಸಲ್ಲಬೇಕಾಗದ ಗೌರವವನ್ನು ಸಲ್ಲಿಸಿಯೇ ಇದ್ದಾರೆ.

ಆಚಾರ್ಯ ಮಣವಾಳ ಮಾಮುನಿಗಳು ರಾಮಾನುಜ ದರ್ಶನವನ್ನು ಪ್ರಚಾರಮಾಡಿದವರಲ್ಲಿ ಅಗ್ರಗಣ್ಯರು. ಅವರ ತತ್ವಗಳಲ್ಲಿ ಎರಡರ್ಥ ಮಾಡಿದವರನ್ನು ಕಟುವಾಗಿ ಖಂಡಿಸಿದರು. ಆ ರೀತಿ ಅರ್ಥವನ್ನು ಅಪಾರ್ಥಮಾಡಿ ಆ ಹಿರಿಯರನ್ನೆಲ್ಲಾ ಅವ ಮಾನಿಸುವುದು ಗುರುದ್ರೋಹ ಮಾಡಿದಂತೆ ಎಂದು ಸಾರಿದರು. ಆಚಾರ್ಯರ ತತ್ವಗಳಿಗೆ ಇದೇ ಅರ್ಥವೆಂದು ಸಪ್ರಮಾಣವಾಗಿ ಸಾರಿದ ಸಿದ್ಧಪುರುಷರು. ಈ ಭೇದವನ್ನು ಹೋಗಲಾಡಿಸಲೆಂದೆ ರಾಮಾನುಜರು ಮತ್ತೆ ಅವತಾರವೆತ್ತಿದರು ಎಂಬುವುದನ್ನೂ ಈ ವಿಚಾರದಿಂದಲೂ ನಾವು ತಿಳಿಯಬಹುದಾಗಿದೆ. ಇಂತಹ ಪರಮಕಾರಣಿಕರಾದ ಆಚಾರ್ಯರು ಈ ಪ್ರಪಂಚದಲ್ಲಿ ಇನ್ನೊಬ್ಬರಿದ್ದರೆಯೆ. ಅಂತೆಯೇ ನಾವು ಅವರಿಗೆ ಮಂಗಳಾಶಸನ ಮಾಡುವುದು ಅತಿಸೂಕ್ತ.

ಮಣವಾಳಮಾಮುನಿಯೇ
ಇನ್ನು ಮೊರು ನೂತ್ತಾಂಡಿರಂ

ಇದರ ಅರ್ಥ ಮಣವಾಳ ಮಾಮುನಿಯೆ ಇನ್ನೂ ಒಂದು ನೂರುಕಾಲ ನನ್ನಲ್ಲಿ ನೆಲೆಸು ಎಂದು ಇದರಲ್ಲಿ ಸ್ವಾರಸ್ಯ ಇಂತಿದೆ. ಬರಿಯ ನೂರುವರ್ಷಗಳು ಇದ್ದರೆ ಸಾಕೆ ಎಂದಲ್ಲವೆ ನೀವು ಕೇಳುವುದು ಈಗ ಅನುಸಂಧಾನ ಮಾಡುವವರು ನೂರುವರುಷ ಇರು ಎಂದರೆ ನೂರುವರುಷ ಇರುವುದು ನಿಶ್ಚಯವಾಗುತ್ತದೆ. ಇಂತಹ ಮಂಗಳಾಶಾಸನವನ್ನು ಮುಂದೆಯೂ ಅನುಸಂಧಾನ ಮಾಡುವವರ ಅಪೇಕ್ಷೆಯಂತೆ ಅವರು ಅವರ ಮಂಗಳಾಶಾಸನದ ಕಾರಣದಿಂದ ಮುಂದೆ ನೂರುವರುಷಗಳು ಬಾಳುತ್ತಾರಲ್ಲವೆ. ಹೀಗೆ ಈ ಮಂಗಳಾಶಾಸನದ ನಿರಂತ ಅನುಸಂಧಾನದಿಂದ ಮಣವಾಳ ಮುನಿಗಳು ಈ ಲೋಕದಲ್ಲಿ ತಮ್ಮ ಯಶಃಶ್ಶರೀರದಿಂದ ನಿರಂತವಾಗಿ ಬೆಳಗಬಲ್ಲರೆಂಬ ಅರ್ಥವಾಗುತ್ತದೆ ತಾನೆ.

ಇತಿ ಶಮ್

# ಪತ್ರಂ-ಪುಷ್ಪಂ-ಫಲಂ-ತೋಯಂ

---'ಕೈಪು' ಲಕ್ಷ್ಮೀನರಸಿಂಹಶಾಸ್ತ್ರಿ.

ಪತ್ರಂ-ಪುಷ್ಪಂ-ಫಲಂ-ತೋಯಂ
ಯೋ ಮೇ ಭಕ್ತ್ಯಾ ಪ್ರಯಚ್ಛತಿ
ತದಹಂ ಭಕ್ತ್ಯುಪಹೃತ
ಮಶ್ನಾಮಿ ಪ್ರಯತಾತ್ಮನಃ
(ಭಗವದ್ಗೀತೆ : ೯-೨೬)





"ನನ್ನಲ್ಲಿ ಅನನ್ಯ ಭಕ್ತಿಯುಳ್ಳ ಉಪಾಸಕನು ಪತ್ರ-ಪುಷ್ಪ-ಫಲ-ಜಲ- ಈ ಯಾವುದನ್ನೇ ಆಗಲಿ, ಭಕ್ತಿ ಪೂರ್ವಕವಾಗಿ ಅರ್ಪಿಸಿದರೆ ಅದನ್ನು ಸ್ವೀಕರಿಸುತ್ತೇನೆ" - ಎಂಬುದಾಗಿ ಭಗವಂತನಾದ ಶ್ರೀಕೃಷ್ಣನು ಭಗವದ್ಗೀತೆಯಲ್ಲಿ ಘೋಷಿಸಿದ್ದಾನೆ. ಅಶ್ನಾಮಿ ಎಂಬುದಕ್ಕೆ "ತಿನ್ನುತ್ತೇನೆ" ಎಂಬ ಅರ್ಥವೂ ಉಂಟು. ಆದ್ದರಿಂದಲೇ ಭಗವಂತನನ್ನು ಪೂಜೆಯಿಂದ ತೃಪ್ತಿಪಡಿಸುವ ಷೋಡಶೋಪಚಾರಗಳಲ್ಲಿ ನೈವೇದ್ಯಕ್ಕೆ ಮಹತ್ವದ ಸ್ಥಾನವಿದೆ. ಚರಾಚರಗಳೆಲ್ಲ ಭಗವಂತನಲ್ಲೇ ಅಡಗಿರುವುದರಿಂದ ನಾವು ಅರ್ಪಿಸಿದ ವಸ್ತುವಿನಿಂದ ಆತನು ತೃಪ್ತನಾದರೆ ಚರಾಚರಗಳೆಲ್ಲವೂ ತೃಪ್ತಿ ಹೊಂದಿದಂತಾಗುತ್ತದೆ. ಆದರೆ ಪತ್ರ, ಪುಷ್ಪ, ಜಲ - ಎಂದು ಹೇಳಿ ಭಗವಂನು ಭಕ್ತನಿಗೆ ಉಪಾಸನೆಯ ಸೌಲಭ್ಯವನ್ನು ಹೆಚ್ಚಿಸಿದ್ದಾನೆ. ಹೀಗೆ ಪತ್ರ ಪುಷ್ಪ ಜಲಗಳಿಂದ ತೃಪ್ತನಾಗಿ ಭಗವಂತನು ಉದ್ಧರಿಸಿದ ಭಕ್ತರ ಹೆಸರುಗಳೂ ಸಹ ನಮಗೆ ಭರವಸೆ ನೀಡುತ್ತವೆ. ಇಲ್ಲಿ ಕೆಲವು ನಿದರ್ಶನಗಳನ್ನು ಸ್ಮರಿಸೋಣ.

## ಪತ್ರ - ಉಪಹಾರ :

ಒಂದು ದಿನ ದೂರ್ವಾಸಮುನಿಯು ದುರ್ಯೋಧನನಲ್ಲಿಗೆ ಬಂದನು. ಆತನಿಗೆ ಆತಿಥ್ಯ ನೀಡುವುದೆಂದರೆ ಅಷ್ಟೇನೂ ಸುಲಭವಲ್ಲ. ಆತನು 'ಕೊಟ್ಟರೆ ವರ, ಇಟ್ಟರೆ ಶಾಪ' ಎನ್ನುವಂತಹ ಕೋಪಿಷ್ಠನಾದ ತಪಸ್ವಿ. ದುರ್ಯೋಧನನು ಬಹಳ ನಮ್ರತೆಯನ್ನು ಪ್ರದರ್ಶಿಸಿ ಆತನಿಗೆ ಉಪಚಾರ ಮಾಡಿದ. ಕೆಲವು ದಿನಗಳ ಆತಿಥ್ಯ ಪಡೆದು ತೃಪ್ತನಾದ ಮುನಿಯು ನಿನಗೆ ಬೇಕಾದ ವರ ಕೇಳಿಕೋ" ಎಂದ. ದುರ್ಯೋಧನನು ಆತಿಥ್ಯ ನೀಡಿದ್ದು ಮುನಿಯ ಮೇಲಿದ್ದ ಭಕ್ತಿಯಿಂದ ಅಲ್ಲ. ಇಂತಹ ಸಂದರ್ಭಕ್ಕಾಗಿಯೇ ಕಾಯುತ್ತ ಅವನು ಮೊದಲೇ ಸಂಚು ಮಾಡಿಕೊಂಡಿದ್ದನು - "ಮುನಿವರ್ಯ, ಮತ್ತಾವ ವರವೂ ನನಗೆ ಬೇಡ; ನನ್ನಲ್ಲಿ ಆತಿಥ್ಯ ಸ್ವೀಕರಿಸಿದಂತೆಯೇ ನೀವು ನಿಮ್ಮ ಹತ್ತುಸಾವಿರ ಶಿಷ್ಯರೊಡನೆ ಕಾಮ್ಯಕವನದಲ್ಲಿರುವ ಯುಧಿಷ್ಠಿರನಲ್ಲಿಗೂ ಹೋಗಿ ಆತಿಥ್ಯಸ್ವೀಕರಿಸಬೇಕು. ಆದರೆ ಒಂದು ಮಾತು, ದ್ರೌಪದಿಯ ಊಟವಾದಮೇಲೆ ಮಧ್ಯಾಹ್ನ ನೀವು ಅಲ್ಲಿಗೆ ಹೋಗಬೇಕು" - ಎಂದು ಕೋರಿದ.

ದುರ್ಯೋಧನನು ಹಾಗೆ ಕೋರಿದ್ದರಲ್ಲಿ ದುರುದ್ದೇಶವಿತ್ತು. ಪಾಂಡವರು ವನವಾಸದಲ್ಲಿದ್ದರೂ ಅನ್ನಕ್ಕೆ ಬರವಿರಲಿಲ್ಲ. ಸೂರ್ಯನು ದ್ರೌಪದಿಗೆ ಅನುಗ್ರಹಿಸಿಕೊಟ್ಟಿದ್ದ ಅಕ್ಷಯಪಾತ್ರೆ ಇತ್ತು. ಎಷ್ಟೇ ಮಂದಿ ಬಂದರೂ ಬಡಿಸಬಹುದಾಗಿತ್ತು. ಆದರೆ ಒಂದು ನಿಬಂಧನೆ - ಎಲ್ಲರಿಗೂ ಬಡಿಸಿ ಆದಮೇಲೆ ಕೊನೆಯಲ್ಲೇ ದ್ರೌಪದಿ ಊಟ ಮಾಡಬೇಕು; ದ್ರೌಪದಿಯ ಊಟವಾದಮೇಲೆ ಅಕ್ಷಯ ಪಾತ್ರೆಯಿಂದ ಆ ದಿನ ಮತ್ತೆ ಅನ್ನ ಉತ್ಪತ್ತಿಯಾಗುವಂತಿಲ್ಲ. ಆದ್ದರಿಂದಲೇ ದುರ್ಯೋಧನನು ದೂರ್ವಾಸರಲ್ಲಿ ವರ ಬೇಡುವಾಗ ಹಾಗೆ ಹೇಳಿದ್ದು. ಹೀಗಾದರೂ ದೂರ್ವಾಸರ ಶಾಪಕ್ಕೆ ಪಾಂಡವರು ತುತ್ತಾಗಲೆಂಬುದು ಅವನ ದುರಾಲೋಚನೆ.

ಕೊಟ್ಟ ಮಾತಿನಂತೆ ದೂರ್ವಾಸಮುನಿ ಬಂದೇ ಬಿಟ್ಟನು. ಯುಧಿಷ್ಠಿರನು ಅವರನ್ನು ಸ್ವಾಗತಿಸಿದನು - "ಸ್ನಾನ ಮುಗಿಸಿಕೊಂಡು ಬನ್ನಿ. ಅಷ್ಟರಲ್ಲಿ ಅಡಿಗೆ ಸಿದ್ಧವಾಗುತ್ತದೆ" - ಎಂದುಬಿಟ್ಟ. ಒಳ್ಳೆಯ ಮಧ್ಯಾಹ್ನ ಸಮಯ. ದ್ರೌಪದಿಯ ಊಟ ಮುಗಿದು ಮುನಿ ಸ್ನಾನಕ್ಕಾಗಿ ಶಿಷ್ಯರೊಡನೆ ನದಿಗೆ ಹೋಗಿದ್ದಾನೆ. ಶಿಷ್ಯರಾದರೋ ಒಬ್ಬಿಬ್ಬರಲ್ಲ, ಹತ್ತುಸಾವಿರ ಮಂದಿ. ಈಗಲೋ ಆಗಲೋ ಅವರು ಬರುತ್ತಾರೆ. ಬಡಿಸಲು ಅನ್ನವಿಲ್ಲ. ದೂರ್ವಾಸನ ಕೋಪದ ಶಾಪದಿಂದ ಪಾರಾಗುವ ದಾರಿ ಕಾಣುತ್ತಿಲ್ಲ. ಈಗ ಏನು ಮಾಡಬೇಕು? ದೂರ್ವಾಸಮುನಿ ಬಂದಿರುವುದರ ಹಿನ್ನೆಲೆ ಕೇವಲ ಊಟವೊಂದೇ ಅಲ್ಲ - ಎಂಬುದು ದ್ರೌಪದಿಗೆ ಮನದಟ್ಟಾಗಿಬಿಟ್ಟಿತು. ಹಿಂದೆ ಕುರುಸಭೆಯಲ್ಲಿ ತನಗೆ ಅಕ್ಷಯವಸ್ತ್ರವನ್ನು ನೀಡಿ ದುಶ್ಶಾಸನನ ಹಿಂಸೆಯಿಂದ ಪಾರುಮಾಡಿದಂತೆ ಈಗಲೂ ತನ್ನನ್ನು ಸಂಕಟದಿಂದ ಪಾರುಮಾಡುವಂತೆ ಭಗವಂತನಿಗೆ ಮೊರೆಯಿಟ್ಟಳು. ಆದರೆ ಕುರುಸಭೆಯಲ್ಲಿ ಭಗವಂತನಿಗೆ ಕರೆ ನೀಡುವಾಗ ಮಾಡಿದ ತಪ್ಪನ್ನು ಈಗ ಆಕೆ ಮಾಡಲಿಲ್ಲ. ಅಲ್ಲಿ "ಗೋವಿಂದ ದ್ವಾರಕಾವಾಸಿನ್ ಕೃಷ್ಣ ಗೋಪೀಜನ ಪ್ರಿಯ" - ಎಂದು ಕರೆದಿದ್ದಳು. ತನ್ನನ್ನು ರಕ್ಷಿಸಬೇಕಾದ ಕೃಷ್ಣನು ದ್ವಾರಕೆಯಿಂದ ಬರತಕ್ಕುದೆಂದು ಭಾವಿಸಿದ್ದರಿಂದ ಆಗ ವಿಳಂಬವಾಯಿತು. ಅದೆಲ್ಲ ಆಕೆಗೆ ನೆನಪಿದೆ! ಆದ್ದರಿಂದಲೇ ಈಗ ಆಕೆ 'ದ್ವಾರಕಾವಾಸಿನ್' ಎನ್ನಲಿಲ್ಲ-

ಸರ್ವಾಧ್ಯಕ್ಷ ಪರಾಧ್ಯಕ್ಷ
ತ್ವಾಮಹಂ ಶರಣಂ ಗತಾ
ಪಾಹಿಮಾಂ ಕೃಪಯಾದೇವ
ಶರಣಾಗತ ವತ್ಸಲ (೨೬೩-೧೬ ವನಪರ್ವ)

## ತಿರುಮಲೆ ತಿರುಪತಿ ದೇವಸ್ಥಾನಗಳು ತಿರುಪತಿ

# ಶ್ರೀ ವೆಂಕಟೇಶ್ವರ ನಿತ್ಯ ಅನ್ನದಾನ ಯೋಜನೆ

**ಎಂ. ಕೆ. ಆರ್. ವಿನಾಯಕ್**, ಐ.ಎ.ಎಸ್.,

ಕಾರ್ಯನಿರ್ವಹಣಾಧಿಕಾರಿ.

ಪ್ರಿಯ ಭಕ್ತ ಬಂಧುಗಳೆ;

ಅನ್ನದಾನಕ್ಕಿಂತ ಇನ್ನು ಚೆನ್ನಾದ ಉನ್ನತವಾದ ದಾನ ಮತ್ತೊಂದಿಲ್ಲ. ಹಸಿದು ಬಂದವರಿಗಶನವೀಯುವುದು ನಮ್ಮ ದೇಶದಲ್ಲಿ ಒಂದು ಸೇವೆ ಮಾತ್ರವೇ ಅಲ್ಲ; ವೇದ ಕಾಲದಿಂದ ಆಚರಣೆಯಲ್ಲಿರುವ ಪರಂಪರಾಗತ ಧರ್ಮವೂ ಆಗಿದೆ. ಆಹಾರವನ್ನು ನೀಡುವವರು ದೇವತೆಗಳೊಡನೆ ಸ್ಥಾನ ಪಡೆಯುವರೆಂದು ಹೇಳಲಾಗಿದೆ.

ತಿರುಮಲೆ ಯಾತ್ರಿಕಗರಿಗೆ ಉಚಿತವಾಗಿ ಹಾಗೂ ಪೂರ್ಣವಾಗಿ ಭೋಜನ ನೀಡುವ ಉದ್ದೇಶದಿಂದ 1985 ರಲ್ಲಿ ತಿರುಮಲೆ ತಿರುಪತಿ ದೇವಸ್ಥಾನಗಳಿಂದ ಆರಂಭಿಸಲ್ಪಟ್ಟ ಶ್ರೀ ವೆಂಕಟೇಶ್ವರ ನಿತ್ಯ ಅನ್ನದಾನಯೋಜನೆಯು ಶೋಭಾಕರವಾದ ಯಶಸ್ಸು ಪಡೆದಿದೆ. ಭಾರತಾದ್ಯಂತದ ದಾನಿಗಳಿಂದ ಈ ಯೋಜನೆಯ ಬಗ್ಗೆ ಅತ್ಯುತ್ಸಾಹ ಕಂಡು ಬರುತ್ತಿದೆ.

ಭೋಜನದ ಗುಣಮಟ್ಟವೂ, ಉತ್ಕೃಷ್ಟತೆಯೂ, ಸಾರ್ವಜನಿಕರ ಶ್ಲಾಘನೆಗೆ ಪಾತ್ರವಾಗಿದೆ. ಈ ವಿಶಿಷ್ಟವಾದ ಅನ್ನದಾನಯೋಜನೆಯ ಸಂತಸಕರ ಫಲವನ್ನು ತಿರುಮಲೆಯ ಬಹುತೇಕ ಯಾತ್ರಿಕರು ಹೊಂದುತ್ತಿದ್ದಾರೆ.

ನಿತ್ಯ ಅನ್ನದಾನಯೋಜನೆಯಲ್ಲಿ, ಶ್ರೀ ಸಾಮಾನ್ಯ ಭಕ್ತರೂ ತಮ್ಮ ಯಥಾಶಕ್ತಿ ವಂತಿಗೆಯನ್ನು ಸಲ್ಲಿಸುವುದರ ಮೂಲಕ, ಪಾಲುಗೊಳ್ಳುವಂತೆ ಮಾಡಬೇಕೆಂದು ಯೋಚಿಸಿ, ಈ ವಂತಿಗೆಯ ಮೊತ್ತವನ್ನು ಸಾಕಷ್ಟು ಕಡಿಮೆ ಮಾಡಲು ತಿ. ತಿ. ದೇವಸ್ಥಾನಗಳು ಈಚೆಗೆ ನಿರ್ಧರಿಸಿದೆ. ತಾವು ರೂ. 1000/- ಅಥವಾ ಗುಣಕಗಳಲ್ಲಿ ದಾನ ಮಾಡಿದರೂ ಸಾಕು; ಉನ್ನತ ಹಾಗೂ ಅರ್ಹವಾದ ಕಾರ್ಯದಲ್ಲಿ ನೆರವು ನೀಡಿದಂತಾಗಿ ಆ ಮೂಲಕ ಕಾಲಾತೀತ ಪರಂಪರೆಯಾದ ಅನ್ನದಾನಯೋಜನೆಯನ್ನು ತಿ.ತಿ.ದೇ. ಉಳಿಸಿಕೊಂಡು ಮುಂದುವರೆಯುವಂತೆ ಮಾಡಿದವರಾಗುತ್ತೀರಿ.

ದೂರದೂರುಗಳಿಂದ ತಿರುಮಲೆಗೆ ಆಗಮಿಸುವ ಯಾತ್ರಿಕರ ಬಗ್ಗೆ ತಮ್ಮ ಹೃದಯ ಸಹಾನುಭೂತಿಯಿಂದ ಆರ್ದ್ರವಾಗುವಲ್ಲಿ, ಪರಿಷ್ಕೃತವಾದ ನಿತ್ಯ ಅನ್ನದಾನಯೋಜನೆಯಲ್ಲಿ ಸೇರಿ, ಈ ಪವಿತ್ರ ಸೇವೆಯಲ್ಲಿ ಭಾಗಿಗಳಾಗಿರಿ.

ಅನ್ನೇಶ್ರಿತಾನಿ ಭೂತಾನಿ ಅನ್ನಂ ಪ್ರಾಣಮಿತಿ ಶ್ರುತಿಃ
ತಸ್ಮಾದನ್ನಂ ಪ್ರದಾತವ್ಯಂ ಅನ್ನಂ ಹಿ ಪರಮಂ ಹವಿಃ
--ಬೋಧಾಯನ ಧರ್ಮಸೂತ್ರ.

ಒಳಶಕ್ತಿಯ ಜೀವಸತ್ವ ಆಹಾರ ಎಂದು ವೇದಗಳು ಘೋಷಿಸುತ್ತಿವೆ. ಅನ್ನದಾನ, ಭೌತಿಕ ಗುಣಗಳನ್ನು ಮೀರಿ ನಿಲ್ಲುವ ಅಮೂಲ್ಯ ಕ್ರಮವಾಗಿದೆ. ಹಾಗಾಗಿ ಅನ್ನದಾನ ಮಾಡಬೇಕು.

ವಂದನೆಗಳೊಡನೆ ತಮ್ಮ ವಿಶ್ವಾಸಿ,
**ಎಂ. ಕೆ. ಆರ್. ವಿನಾಯಕ್**

ಮಧ್ಯಾಹ್ನದ ಭುಕ್ತಾಯಾಸ ತೀರಿಸಿಕೊಳ್ಳಲು ಆಗ ತಾನೇ ಮಲಗಿದ್ದ ಶ್ರೀಕೃಷ್ಣನು ಸೆಜ್ಜೆಯಲ್ಲಿದ್ದ ರುಕ್ಮಿಣಿಯನ್ನು ಬಿಟ್ಟು ದ್ರೌಪದಿಯ ಮುಂದೆ ಬಂದು ಬಿಟ್ಟ- "ತಂಗಿ, ತುಂಬ ಹಸಿದಿದ್ದೇನೆ. ಮೊದಲು ಒಂದಷ್ಟು ಊಟ ಬಡಿಸು. ಅನಂತರ ಏನೆಲ್ಲ ಮಾಡುವಿಯಂತೆ !" -ಎಂದ.

ಇದೆಂತಹ ವಿಷಮ ಪರೀಕ್ಷೆ! ಆದರೆ ಶ್ರೀಕೃಷ್ಣನು ಅಷ್ಟಕ್ಕೆ ಸುಮ್ಮನಾಗಲಿಲ್ಲ - "ಅಕ್ಷಯ ಪಾತ್ರೆಯನ್ನು ತಂದು ನನಗೆ ತೋರಿಸು, ಆಮೇಲೆ ನೋಡೋಣ" ಪಾತ್ರೆಯ ಕಂಠಪ್ರದೇಶದಲ್ಲೇ ಅಂಟಿಕೊಂಡಿದೆ ಶಾಕಾನ್ನ!

ಶಾಕವೆಂದರೆ ತರಕಾರಿಯ ಹೋಳು. ಅದು ಪತ್ರ - ಜಾತಿಗೆ ಸೇರಿದ್ದೇ. ಪೂಜೆಯಲ್ಲಿ ತುಲಸೀದಳ, ಬಿಲ್ವ ಪತ್ರ, ಮಾಚೀಪತ್ರ ಇತ್ಯಾದಿಗಳ ಹಾಗೆ ಊಟದಲ್ಲಿ ತರಕಾರಿಯು ಪತ್ರವೆನಿಸುತ್ತದೆ.

ಶ್ರೀಕೃಷ್ಣನು ಅದನ್ನು ಬಾಯಿಗೆ ಹಾಕಿಕೊಂಡ. ದ್ರೌಪದಿಗೆ ಆಶ್ಚರ್ಯ ತನ್ನ ಕಣ್ಣು ತಪ್ಪಿಸಿ ಅದು ಪಾತ್ರೆಯಲ್ಲಿ ಉಳಿದುಕೊಂಡದ್ದಾದರೂ ಹೇಗೆ - ಎಂದು. ಇರಲಿ, ಅಷ್ಟರಿಂದಲೇ ಕೃಷ್ಣಯ್ಯನ ಹಸಿವು ಶಾಂತವಾದೀತಾದರೂ ಹೇಗೆ ? - ಎಂದು ಯೋಚಿಸುತ್ತಿದ್ದಾಳೆ. ಆದರೆ ಭಗವಂತನು ಮಹತೋಮಹೀಯನು ಹೇಗೋ ಹಾಗೆಯೇ ಅಣೋರಣೀಯನೂ ಹೌದು. ಭಕ್ತಿಯಿಂದ ನೀಡುವ ಆತಿಥ್ಯ ಎಷ್ಟಾದರೂ ಏಕೆ ಬೇಕು ? ಶಾಕವನ್ನು ನುಂಗುತ್ತ - "ಚರಾಚರಗಳನ್ನೊಳಗೊಂಡು, ದೇವನಾದ ವಿಶ್ವಾತ್ಮನು ಇಷ್ಟರಿಂದಲೇ ಸಂತುಷ್ಟನಾಗಲಿ. ಇನ್ನು ಮುನಿಸಮೂಹವನ್ನು ನೀವು ಊಟಕ್ಕೆ ಕರೆತನ್ನಿರಿ" - ಎಂದನು ಭಗವಂತ!

ಇತ್ತ ನದಿಯಲ್ಲಿ ಸ್ನಾನಮುಗಿಸಿದ ದೂರ್ವಾಸರಿಗೂ ಶಿಷ್ಯರಿಗೂ ಹೊಟ್ಟೆಯಲ್ಲಿ ಜಾಗವೇ ಇಲ್ಲ. ಕಂಠದವರೆಗೂ ಊಟ ಮಾಡಿದಂತಾಗಿ ಕಾರದ ತೇಗು ಬರುತ್ತಿದೆ. ಶಿಷ್ಯರೆಲ್ಲರೂ ತಮ್ಮ ಪರಿಸ್ಥಿತಿಯನ್ನು ಗುರುವಿಗೆ ತಿಳಿಸಿದರು. ದೂರ್ವಾಸರಿಗೂ ಸಹ ಎಲ್ಲವೂ ಅರ್ಥವಾಯಿತು; ಭಯವೂ ಆವರಿಸಿತು - "ಶಿಷ್ಯರೇ, ಅಕಾಲದಲ್ಲಿ ಎಂದು ಗಡಿಬಿಡಿ ಇಟ್ಟಿಸಿದ್ದೇವೆ. ಅಡಿಗೆ ಮಾಡಿಸಿದ್ದೇವೆ. ಪಾಂಡವರು ವಾಸುದೇವನ ಕೃಪೆಯುಳ್ಳವರು. ಹಿಂದೊಮ್ಮೆ ಹೀಗೆಯೇ ಹರಿಭಕ್ತನಾದ ಅಂಬರೀಕ್ಷನನ್ನು ಕೆಣಕಿ ನಾನು ಪಟ್ಟ ಭಂಗವನ್ನು ನೆನಸಿಕೊಂಡರೆ ಈಗಲೂ ಭಯವಾಗುತ್ತಿದೆ. ಊಟಕ್ಕೆ ಬರುವುದಾಗಿ ಹೇಳಿ ಬಂದು, ಈಗ ಬೇಡವೆಂದರೆ ಧರ್ಮಪರಾಯಣರಾದ ಪಾಂಡವರು ತಮ್ಮ ಕೋಪಾಗ್ನಿಯಿಂದ

ನಮ್ಮನ್ನು ಸುಟ್ಟುಹಾಕಿಯಾರು. ನಮ್ಮನ್ನು ಹುಡುಕಿಕೊಂಡು ಇನ್ನೇನು ಈಗಲೋ ಆಗಲೋ ಅವರು ಇಲ್ಲಿಗೆ ಬರುತ್ತಾರೆ. ಆದ್ದರಿಂದ ಅವರ ಕಣ್ಣಿಗೆ ಬೀಳದ ಹಾಗೆ ಪಲಾಯನ ಮಾಡಿರಿ" - ಎಂದರು ದೂರ್ವಾಸಮುನಿ! ಅದೇ ಆಯಿತು. ಸಹದೇವನು ಹುಡುಕಿಕೊಂಡು ಬಂದಾಗ ನದಿಯ ತೀರದಲ್ಲಿ ದೂರ್ವಾಸಮುನಿಯಾಗಲಿ ಶಿಷ್ಯರಾಗಲಿ, ಕೊನೆಗೆ ಅವರ ನೆರಳಾಗಲಿ ಅಲ್ಲಿರಲಿಲ್ಲ. ದ್ರೌಪದಿಯಿಂದ ಅರ್ಪಿತವಾದ ಶಾಕರೂಪವಾದ ಪತ್ರದಿಂದ ಸಂತುಷ್ಟನಾದ ಪರಮಾತ್ಮನು, ಅವರನ್ನು ದೂರ್ವಾಸರ ಶಾಪದಿಂದ ತಪ್ಪಿಸಿ ಉದ್ಧಾರ ಮಾಡಿದನು. ಶ್ರೀಮನ್ಮಹಾಭಾರತವು ವನಪರ್ವದಲ್ಲಿ ಪತ್ರೋಪಹಾರದ ಈ ಪ್ರಸಂಗ ನಿರೂಪಿತವಾಗಿದೆ. (ನೀರು ನೀರುಂಡಾಗ ತಣಿಯದೇ ಭೋರುಹಸಾಕಿ ಎಂದು ವಿವರಿಸಿದ್ದಾನೆ ಕುಮಾರವ್ಯಾಸ ಈ ಪ್ರಸಂಗದಲ್ಲಿ)

ವ್ರತವಿಧಾನಗಳಲ್ಲಿ ಪತ್ರ ಪೂಜೆ ವ್ರತದ ಅಂಗವೇ ಆಗಿದೆ. ಭಕ್ತಿಯಿಂದ ಅರ್ಪಿಸಿದ ಪತ್ರ ಮಾತ್ರದಿಂದಲೂ ಭಗವಂತನು ಸಂತುಷ್ಟನಾಗುತ್ತಾನೆ. ಅಷ್ಟೇ ಅಲ್ಲ, ಭಗವಂತನ ಭಕ್ತಪರಾಧೀನತೆಯ ಪರಾಕಾಷ್ಠೆಯನ್ನು ಆಲಿಸಿರಿ --

ತುಲಸೀದಳ ಮಾತ್ರೇಣ
ಜಲಸ್ಯ ಚುಲುಕೇನ ಚ
ವಿಕ್ರೀಣೀತೇ ಸ್ವಮಾತ್ಮಾನಂ
ಭಕ್ತೇಭ್ಯೋ ಭಕ್ತವತ್ಸಲಃ

ಭಕ್ತಿಯಿಂದ ಅರ್ಪಿಸುವ ಒಂದು ತುಲಸೀದಳ ಮತ್ತು ಒಂದು ಚುಳಕದ ನೀರಿನ ಮೌಲ್ಯವಾಗಿ ಭಕ್ತವತ್ಸಲನಾದ ಭಗವಂತನು ತನ್ನನ್ನೇ ಭಕ್ತರಿಗೆ ಮಾರಿಕೊಂಡು ಬಿಡುತ್ತಾನೆ! ಸತ್ಯಭಾಮಾದೇವಿಯು ಪುಣ್ಯವ್ರತಮಾಡಿ ಪತಿದಾನವೆಂದು ಶ್ರೀಕೃಷ್ಣನನ್ನು ನಾರದರಿಗೆ ದಾನಮಾಡಿಬಿಟ್ಟಳು. ಆತನನ್ನು ಮರಳಿ ಪಡೆಯಲು ತುಲಾಭಾರ ನಡೆಯಿತು. ಮುತ್ತು ರತ್ನ ಬಂಗಾರಗಳ ಮಾತು ಹಾಗಿರಲಿ, ಇದ್ದ ಏನೆಲ್ಲ ವಸ್ತುಗಳನ್ನು ತಕ್ಕಡಿಗೆ ಹಾಕಿದರೂ ಶ್ರೀಕೃಷ್ಣನು ಕುಳಿತ ತಟ್ಟೆ ಅಳ್ಳಾಡಲಿಲ್ಲ. ಭಕ್ತಿಯಿಂದ ರುಕ್ಮಿಣಿಯು ಒಂದು ತುಲಸೀದಳವನ್ನು ತಟ್ಟೆಯಲ್ಲಿಟ್ಟ ಕೂಡಲೇ ಶ್ರೀಕೃಷ್ಣನು ಕುಳಿತ ತಟ್ಟೆ ತಟ್ಟನೆ ಎದ್ದಿತಂತೆ!

## ಪುಷ್ಪ - ಸಂತುಷ್ಟಿ :

ದ್ರಾವಿಡ ದೇಶದಲ್ಲಿ ಇಂದ್ರದ್ಯುಮ್ನನೆಂಬ ಪಾಂಡ್ಯವಂಶದ ರಾಜನು ಆಳುತ್ತಿದ್ದನು. ಧರ್ಮಾತ್ಮನಾದ ಆತನು ವಿಷ್ಣುಭಕ್ತನಾಗಿದ್ದನು. ಭಕ್ತಿ ಪಾರಮ್ಯದಿಂದ ಆತನು ಕೊನೆಕೊನೆಗೆ ರಾಜ್ಯತ್ಯಾಗಮಾಡಿ ಮಲಯ ಪರ್ವತದಲ್ಲಿ ತಪೋನಿರತನಾದನು. ಶ್ರೀಮನ್ನಾರಾಯಣನ ಧ್ಯಾನದಲ್ಲಿ ಆತನು ಬಾಹ್ಯಲೋಕವನ್ನೇ ಮರೆಯುತ್ತಿದ್ದನು. ಒಂದು ದಿನ ಅಗಸ್ತ್ಯಮುನಿಯು ಶಿಷ್ಯರೊಡನೆ ಆತನಲ್ಲಿಗೆ ಬಂದರು. ಆದರೆ ಧ್ಯಾನದಲ್ಲಿ ಮೈಮರೆತ ಇಂದ್ರದ್ಯುಮ್ನನು ಅವರನ್ನು ಆದರಿಸಲಿಲ್ಲ. ಕೋಪಗೊಂಡ ಮುನಿಯು - "ಶಿಷ್ಟಾಚಾರವನ್ನು ಕಡೆಗಣಿಸಿ ಆನೆಯಂತೆ ಜಡಬುದ್ಧಿಯುಳ್ಳ ನೀನು ಆನೆಯೇ ಆಗು" - ಎಂದು ಶಪಿಸಿ ಹೊರಟು ಹೋದರು.

ಇಂದ್ರದ್ಯುಮ್ನನು ಗಜೇಂದ್ರನಾಗಿ ತ್ರಿಕೂಟ ಪರ್ವತದ ತಪ್ಪಲಿನಲ್ಲಿ, ವರುಣನಿಗೆ ಸೇರಿದ ಋತುಮಂತವೆಂಬ ಕ್ರೀಡಾಕಾನನದಲ್ಲಿ ಹೆಣ್ಣಾನೆಗಳೊಡನೆ ವಿಹರಿಸತೊಡಗಿದನು. ಆದೇ ಕಾಡಿನಲ್ಲಿ ರಮ್ಯವಾದ ಕಮಲಪುಷ್ಪಗಳ ಸರೋವರವಿತ್ತು. ಗಜೇಂದ್ರನು ಆಗಾಗ ಅದರಲ್ಲಿ ಜಲಕ್ರೀಡೆ ಮಾಡುತ್ತಿದ್ದನು. ಗಂಧರ್ವಲೋಕದ ಶ್ರೇಷ್ಠನಾದ ಹುಹೂ ಎಂಬ ಗಂಧರ್ವನು ಇಂದ್ರದ್ಯುಮ್ನನಂತೆಯೇ ದೇವಲನೆಂಬ ಮಹರ್ಷಿಯ ಶಾಪದಿಂದ ಮೊಸಳೆಯಾಗಿ ಅದೇ ಸರೋವರದಲ್ಲಿ ವಾಸಿಸುತ್ತಿದ್ದನು.

ಬೇಸಗೆಯ ಕಾಲದ ಉರಿಬಿಸಿಲಿನ ಒಂದು ಮಧ್ಯಾಹ್ನ ಸಮಯ; ಗಜೇಂದ್ರನು ಬಾಯಾರಿ ನೀರು ಕುಡಿಯಲೆಂದು ಪರಿವಾರದೊಡನೆ ಸರೋವರಕ್ಕೆ ಬಂದನು. ನೀರು ಕುಡಿದಾದಮೇಲೆ ಜಲಕ್ರೀಡೆಗೆಂದು ನೀರಿನೊಳಕ್ಕೆ ಪ್ರವೇಶಿಸುತ್ತಿದ್ದಂತೆಯೇ ಮೊಸಳೆಯು ಅದರ ಕಾಲನ್ನು ಹಿಡಿಯಿತು. ಸಾಮಾನ್ಯವಾದ ಆನೆಯಲ್ಲ, ಸಿಂಹವೂ ಸೇರಿದಂತೆ ಇಡೀ ಕಾಡನ್ನೇ ನಡುಗಿಸುವಂತಹ ಶಕ್ತಿಯುಳ್ಳ ಆನೆ. ಮೊಸಳೆಯನ್ನು ದಡಕ್ಕೆಳೆದು ಪಾರಾಗಲು ಆನೆ ಚಡಪಡಿಸಿತು. ಆದರೆ ಬಲಶಾಲಿಯಾದ ಮೊಸಳೆಯ ಶಕ್ತಿಯ ಮುಂದೆ ಅದರ ಪ್ರಯತ್ನ ಸಾಗಲಿಲ್ಲ. ಆನೆಯು ದಡಕ್ಕೆ ಜಗ್ಗಿದರೆ, ಮೊಸಳೆ ನೀರಿಗೆ ಜಗ್ಗುತ್ತಿದೆ. ವಿಶಾಲವಾದ ಸರೋವರದ ನೀರೆಲ್ಲ ಕೆಸರಾಯ್ತು; ಕಮಲಗಳೆಲ್ಲ ಕಡಿದು ಚೆದುರಿದುವು; ಜಲಚರಗಳೆಲ್ಲ ವ್ಯಾಕುಲಗೊಂಡುವು. ಒಂದೆರಡು ದಿನ - ತಿಂಗಳುಗಳಲ್ಲ; ಸಹಸ್ರವರ್ಷಗಳವರೆಗೆ ಆನೆ - ಮೊಸಳೆಗಳ ಈ ಸಂಘರ್ಷ ನಡೆಯಿತು. ಇಷ್ಟು ದೀರ್ಘಾವಧಿಯವರೆಗೆ ಹೋರಾಡುತ್ತಿದ್ದರೂ ಅವು ಸಾಯದೆ ಬದುಕಿರುವುದನ್ನು ಕಂಡು ದೇವತೆಗಳಿಗೂ ಆಶ್ಚರ್ಯವಾಯಿತು.

ಅಂತ್ಯದಲ್ಲಿ ಗಜೇಂದ್ರನ ಶಕ್ತಿ ಶಿಥಿಲವಾಯಿತು. ದೇಹವು ಸೋತು ಸಡಿಲವಾಗತೊಡಗಿತು. ನೀರಿನಲ್ಲೇ ಇದ್ದುದರಿಂದ ಮೊಸಳೆಯ ಶಕ್ತಿ ಮತ್ತಷ್ಟು ವೃದ್ಧಿಗೊಂಡಿದ್ದು, ಆನೆಯನ್ನು ಬಲವಾಗಿ ಸೆಳೆಯಿತು. ಗಜೇಂದ್ರನು ತನ್ನ ಮರಣಕಾಲ ಸಮೀಪಿಸಿತೆಂದು ನಿರ್ಧರಿಸಿತು. 'ಸಂಕಟ ಬಂದಾಗ ವೆಂಕಟರಮಣ' - ಎಂಬ ಸೂಕ್ತಿಯೇ ಉಂಟು. ಗಜೇಂದ್ರನು ಭಕ್ತಿಯಿಂದ ಶ್ರೀಮನ್ನಾರಾಯಣನನ್ನು ಏಕಾಗ್ರಚಿತ್ತನಾಗಿ ಸ್ಮರಿಸಿದನು.

ಈ ಸಂದರ್ಭದಲ್ಲೇ ಒಂದು ಜಿಜ್ಞಾಸೆ ಏಳುತ್ತದೆ. ಮಾನವನ ಹೊರತು ಉಳಿದ ಮೃಗಾದಿ ಯೋನಿಗಳಲ್ಲಿ ಕರ್ಮಸ್ವಾತಂತ್ರ್ಯವಿಲ್ಲದಿರುವುದರಿಂದ, ಜ್ಞಾನ-ಭಕ್ತಿ-ವೈರಾಗ್ಯಗಳಿಗೆ ಅಲ್ಲಿ ಪ್ರಸಕ್ತಿಯಿಲ್ಲ. ಹೀಗಿದ್ದರೂ ಆನೆಯು ಭಕ್ತಿಯಿಂದ ಭಗವಂತನನ್ನು ಸ್ಮರಿಸಿತೆಂಬುದಕ್ಕೆ ಸಮರ್ಥನೆ ಯೇನು? - ಎಂಬ ಪ್ರಶ್ನೆಯುಂಟಾಗುತ್ತದೆ. ಇದಕ್ಕೆ ಹೇಳಬಹುದಾದ ಹಾಗೂ ಸಮರ್ಪಕವೂ ಸಮರ್ಥನೀಯವೂ ಆದ ಒಂದು ಉತ್ತರವಿದೆ.

ಪೂರ್ವಜನ್ಮದ ಒಂದು ದುಷ್ಕರ್ಮದ ಫಲವಾಗಿ ಲಭಿಸಿದ ಭೋಗಯೋನಿಯು ಕೇವಲ ಹುಟ್ಟು-ಸಾವುಗಳೊಂದಿಗೆ ಸಮಾಪ್ತವಾಗುತ್ತದೆ. ಆದರೆ ಸತ್ಕರ್ಮದ ಫಲವಲ್ಲದೆ ಅನ್ಯಕಾರಣದಿಂದ ಲಭಿಸಿದ ಭೋಗಯೋನಿಯು ಕಾರಣಜನ್ಮವೇ ಆಗಿದ್ದು ಪೂರ್ವಜನ್ಮದ ಸುಸ್ಕಾರ ಉಳಿದೇ ಇರುತ್ತದೆ. ಇಂತಹ ನಿದರ್ಶನಗಳು ವಿರಳ. ವಿರಳವಾದ ಇಂತಹ ನಿದರ್ಶನಗಳಲ್ಲಿ ಗಜೇಂದ್ರನ ಭಕ್ತಿಯೂ ಒಂದಾಗಿದೆ. ಪೂರ್ವಜನ್ಮದಲ್ಲಿ ಇಂದ್ರದ್ಯುಮ್ನನಾಗಿ ವಿಷ್ಣುವನ್ನು ಉಪಾಸನ ಮಾಡಿದ ಫಲವಾಗಿ ಆನೆಯಾಗಿದ್ದರೂ ಶ್ರೀಮನ್ನಾರಾಯಣನನ್ನು ಭಕ್ತಿಯಿಂದ ಸ್ತೋತ್ರಮಾಡಿ ಮೊರೆಯಿಟ್ಟಿತು.

ಗಜರಾಜನ ಅನನ್ಯಭಕ್ತಿಯುಕ್ತವಾದ ಮೊರೆ ವೈಕುಂಠದ ಸರ್ವೇಶ್ವರನಿಗೆ ಒಮ್ಮೆಲೆ ಮುಟ್ಟಿತು. ಕೂಡಲೆ ಆರ್ತತ್ರಾಣಪರಾಯಣನಾದ ಸ್ವಾಮಿಯು ಚಕ್ರವನ್ನು ಹಿಡಿದು ಗರುಡನ ಬೆನ್ನೇರಿ ಹೊರಟು ಬಂದರು. ಕಾಲಿನ ನೋವು - ಪ್ರಾಣಸಂಕಟ - ನಿರಾಶೆಯ ವೇದನೆಗಳಲ್ಲಿ ಪರಿತಪಿಸುತ್ತಿದ್ದ ಗಜರಾಜನು ಆಕಾಶದಲ್ಲಿ ತನಗೆ ಅಭಿಮುಖವಾಗಿ ವೇಗದಿಂದ ಧಾವಿಸುತ್ತಿರುವ ಶ್ರೀಮನ್ನಾರಾಯಣನ ದಿವ್ಯಮೂರ್ತಿಯನ್ನು ಕಂಡನು. ಗಜರಾಜನಿಗೆ ಇನ್ನು ನಶ್ವರ ಶರೀರ ಬೇಕಿರಲಿಲ್ಲ. ಸರೋವರದೊಳಗೆ ಬಹುಮಟ್ಟಿಗೆ ಮುಳುಗಿದ್ದ ತಲೆಯನ್ನು ಬಹಳ ಪ್ರಯಾಸದಿಂದ ನಿಕ್ಕಿಸಿ, ಒಂದು ಸುಂದರವಾದ ಕಮಲಪುಷ್ಪವನ್ನು ತನ್ನ ಸೊಂಡಿಲಿನಿಂದ ಮೇಲಕ್ಕೆತ್ತಿ ಅರ್ಪಿಸುತ್ತ - "ನಾರಾಯಣ, ಅಖಿಲ ಗುರೋ, ಭಗವನ್, ನಮಸ್ತೇ" - ಎಂದನು. (ಶ್ರೀಮದ್ಭಾಗವತ : ೮-೩-೩೨)

ಗರುಡನಿಂದ ತಕ್ಷಣ ಕೆಳಕ್ಕೆ ಧುಮುಕಿದ ಭಕ್ತವರದನು ಗಜರಾಜನೊಡನೆ ಮೊಸಳೆಯನ್ನೂ ನೀರಿನಿಂದ ದಡಕ್ಕೆಳೆದನು; ಚಕ್ರದಿಂದ ಅದರ ಬಾಯನ್ನು ಸೀಳಿ ಆನೆಯನ್ನು ಬಿಡಿಸಿದನು. ಮೊಸಳೆಯ ದೇಹವನ್ನು ತ್ಯಜಿಸಿದ ಹುಹೂ ಗಂಧರ್ವನೂ ಸಹ ಧನ್ಯನಾದನು. ಗಜರಾಜನಿಗೆ ಪಾರ್ಷದ ಸ್ಥಾನವನ್ನಿತ್ತು ಶ್ರೀಮನ್ನಾರಾಯಣನು ಅವನನ್ನು ವೈಕುಂಠಕ್ಕೆ ಕರೆದೊಯ್ದನು.

ಶ್ರೀಮನ್ನಾರಾಯಣನು ಕಮಲನಯನ; ಜಗನ್ಮಾತೆಯಾದ ಲಕ್ಷ್ಮಿಯು ಪದ್ಮಾಲಯವುಳ್ಳ ಮಂಗಳದೇವತೆ; ಹೀಗಿರುವಾಗ ಭಕ್ತಿಯಿಂದ ಭಕ್ತನು ಅರ್ಪಿಸಿದ ಪುಷ್ಪದಿಂದ ಭಗವಂತನು ಸುಪ್ರೀತನಾಗಿ ಉದ್ಧರಿಸದಿರಲು ಸಾಧ್ಯವೆ?

## ಫಲ - ಸ್ವೀಕೃತಿ :

ಭಕ್ತಿಯಿಂದ ಅರ್ಪಿಸಿದ ಫಲಗಳನ್ನು ಸ್ವೀಕರಿಸಿ ಮುಕ್ತಿಯನ್ನು ಅನುಗ್ರಹಿಸಿದ ಭಗವಂತನ ಭಕ್ತವಾತ್ಸಲ್ಯದ ಬಗ್ಗೆ ಯೋಚಿಸುವಾಗ, ತಕ್ಷಣವೇ ನೆನಪಿಗೆ ಬರುವ ಹೆಸರು ಶಬರಿ! ಲೋಕದ ದೃಷ್ಟಿಯಿಂದ ಹೇಳುವುದಾದರೆ, ಬೇಡರ ಕುಲದಲ್ಲಿ ಜನಿಸಿದ ಒಬ್ಬ ಅನಾಥೆ ಶಬರಿ, ಆದರೆ ಅನಾಥರ ನಾಥನಾದ ಶ್ರೀರಾಮನನ್ನೇ ತನ್ನ ಪ್ರಭುವನ್ನಾಗಿ ಆರಿಸಿಕೊಂಡ ಆ ತಪಸ್ವಿನಿ ಎಂದಿಗೂ ತನ್ನನ್ನು ಅನಾಥೆಯನ್ನಾಗಿ ಭಾವಿಸಲಿಲ್ಲ. ಮತಂಗಮುನಿಯ ಶಿಷ್ಯಳಾಗಿ ಪಂಪಾಸರೋವರದ ತೀರದಲ್ಲಿ ಮುನಿಸಂಘದ ಆಶ್ರಯದಲ್ಲಿ ಶಬರಿ ವಾಸಿಸುತ್ತಿದ್ದಳು. ಆಕೆಯ ಅತ್ಯುತ್ಕಟವಾದ ಹಂಬಲ ಒಂದೇ - ಶ್ರೀರಾಮದರ್ಶನ! ಸೀತಾಪಹರಣದ ನಂತರ ಶ್ರೀರಾಮನು ಲಕ್ಷ್ಮಣನೊಡನೆ ಬಂದಾಗ ಶಬರಿ ಸಾಕಷ್ಟು ಮುದುಕಿಯಾಗಿದ್ದು, ರಾಮನಿಗಾಗಿ ಕಣ್ಣಿನಲ್ಲಿ ಪ್ರಾಣವಿಟ್ಟುಕೊಂಡಿದ್ದಳು - "ಪ್ರಭು ಶ್ರೀರಾಮಾ, ಪಂಪಾತಟದ ವೃಕ್ಷಗಳಿಂದ ಆರಿಸಿ ಸಿಹಿಯಾದ ಹಣ್ಣುಗಳನ್ನು ನಿನಗೆ ಅರ್ಪಿಸಲೆಂದೇ ಶೇಖರಿಸಿಟ್ಟಿದ್ದೇನೆ; ಸ್ವೀಕರಿಸು" - ಎಂದು ಅರ್ಪಿಸಿದಳು. ಅವು ಹುಳಿತ ಹಣ್ಣುಗಳಲ್ಲ! ಅವು ಹುಳಿಯಿಲ್ಲವೆಂದು ಆಕೆಗೆ ತಿಳಿದಿದ್ದಾದರೂ ಹೇಗೆ? ಮೊದಲೇ ತಾನು ರುಚಿನೋಡಿ ಅವು ಸಿಹಿಯಾಗಿವೆಯೆಂದು ಖಚಿತಪಡಿಸಿಕೊಂಡು, ಅಂತಹ ಸಿಹಿಯಾದ ಹಣ್ಣುಗಳನ್ನೇ ಆಕೆ ಸಂಗ್ರಹಿಸಿದ್ದಳು. ಈ ದೃಷ್ಟಿಯಿಂದ - "ಶಬರಿಯ ಎಂಜಲ ಹಣ್ಣುಗಳನ್ನು ರಾಮನು ಸ್ವೀಕರಿಸಿದನು" - ಎಂದು ಹೇಳಿದರೆ ತಪ್ಪೇನೂ ಇಲ್ಲ. ವನವಾಸದಲ್ಲೇ ಇದ್ದ ರಾಮನಿಗೆ ಆ ಹಣ್ಣುಗಳು ಅಪೂರ್ವ ಫಲಗಳೇನು ಅಲ್ಲ. ಆದರೆ ಶಬರಿಯು ಭಕ್ತಿಯಿಂದ ಅರ್ಪಿಸಿದ ಹಣ್ಣುಗಳಲ್ಲಿ ಭಗವಂತನಾದ ರಾಮನಿಗೆ ಅಧಿಕವಾದ ಸಿಹಿಯ ಆಸ್ವಾದ ಬಂದಿತು. ಹಣ್ಣುಗಳನ್ನು ತಿನ್ನಿಸಿದ ಶಬರಿಯು ರಾಮನ ಪಾದಗಳಲ್ಲಿ ತಲೆಯಿಟ್ಟಮೇಲೆ ಮತ್ತೆ ಮೇಲಕ್ಕೆ ಏಳಲೇ ಇಲ್ಲ. ಭಗವಂತನು ಆಕೆಯನ್ನು ತನ್ನ ಪಾದಗಳಲ್ಲೇ ಅಡಗಿಸಿಕೊಂಡು ಮುಕ್ತಿ ನೀಡಿದನು. ಅದಾವುದೇ ರಾಮಾಯಣವಾಗಿರಲಿ, ಶಬರಿಯ ಹೆಸರಿಲ್ಲದ ರಾಮಾಯಣ ನಮಗೆ ರಾಮಕಥೆಯಾಗುವುದಿಲ್ಲ.

ಕೃಷ್ಣಾವತಾರದಲ್ಲೂ ಸಹ ಶ್ರೀಕೃಷ್ಣನು ರಾಯಭಾರಕ್ಕಾಗಿ ಹಸ್ತಿನಾವತಿಗೆ ಬಂದಾಗ, ದುರ್ಯೋಧನನು ಮಾಡಿಸಿದ್ದ ಪಕ್ವಾನ್ನಗಳ ರಾಜಭೋಜನವನ್ನು ನಿರಾಕರಿಸಿ ವಿದುರನ ಮನೆಗೆ ಹೋದನಂತೆ. ಅಂದು ವಿದುರನಿಗೆ ಸಿಕ್ಕಿದ ಪರಮಭಾಗ್ಯ; ವಿದುರನ ಹೆಂಡತಿ ಸುಲಭಾದೇವಿಗೆ ಸಿಕ್ಕಿದ ಪರಮಸೌಭಾಗ್ಯ! ಭಗವಂತನನ್ನು ಮಣೆಯಮೇಲೆ ಕುಳ್ಳಿರಿಸಿ ಆಕೆ ಸ್ವಹಸ್ತದಿಂದ ಬಾಳೆಹಣ್ಣುಗಳನ್ನು ಸುಲಿದು ಕೊಡುತ್ತಾಳೆ. ಆದರೆ ಆಕೆಗೆ ಮೈಮೇಲೆ ಪ್ರಜ್ಞೆಯೇ ಇಲ್ಲ; ಭಕ್ತಿಯಲ್ಲಿ ತನ್ಮಯಳಾಗಿ ಆನಂದಬಾಷ್ಪ ಸುರಿಸುತ್ತಿದ್ದ ಆಕೆ ಹಣ್ಣುಗಳನ್ನು ಸಮರ್ಪಿಸಿದ್ದಾದರೂ ಹೇಗೆ? ಸುಲಿದ ಬಾಳೆಯ ಹಣ್ಣನ್ನು ಕೊಡುವ ಬದಲು, ಬಾಳೆ ಹಣ್ಣನ್ನು ಸುಲಿದು ಸಿಪ್ಪೆಯನ್ನು ಕೃಷ್ಣನ ಕೈಗೆ ಕೊಟ್ಟಳಂತೆ! ಭಗವಂತನು ಅದನ್ನೇ ತಿನ್ನುತ್ತಿದ್ದಾನೆ! ಇದು ನಿಜವಾದ ಭಕ್ತಿಪಾರಮ್ಯ; ಇದು ಭಗವಂತನು ಭಕ್ತನಿಂದ ಸಮರ್ಪಿತವಾದ ಫಲಗಳನ್ನು ಸ್ವೀಕರಿಸುವ ಭಕ್ತವಾತ್ಸಲ್ಯದ ಪಾರಮ್ಯ! ವಿದುರನು ಬಂದು ಪತ್ನಿಯನ್ನು ಕಂಡು ಎಚ್ಚರಿಸುವವರೆಗೆ ಇದೇ ರೀತಿಯ ಫಲಸ್ವೀಕರಣ ಕಾರ್ಯ ಮುಂದುವರಿದಿತ್ತು.

ಫಲವು ಭಗವಂತನ ಮೂರ್ತರೂಪ. ನಮ್ಮ ಪೂಜಾವ್ರತಗಳಲ್ಲಿ ಭಗವಂತನಿಗೆ ಫಲಸಮರ್ಪಣೆಯಾಗದೆ ವ್ರತವು ಸಾಂಗವಾಗುವುದೇ ಇಲ್ಲ. ಯಾವುದೇ ಮಂಗಳಸಂಸ್ಕಾರವು ಫಲ ನಾರಾಯಣನ ಪೂಜೆಯಿಂದಲೇ ಪೂರ್ಣವಾಗುತ್ತದೆ. ಅಂದರೆ ಫಲವೂ ಭಗವಂತನೂ ಅಭಿನ್ನವೆಂಬುದನ್ನು ಭಾರತೀಯ ಸಂಸ್ಕೃತಿಯು ಆಚಾರಕ್ಕೂ ಅಳವಡಿಸಿಕೊಂಡಿದೆ.

## ತೋಯಮ್ - ತಾರಕ :

ಅಭಿಷೇಕ ಪ್ರಿಯಶ್ಶಿವಃ - ಎಂಬ ಸೂಕ್ತಿಯಿದೆ. ಭಗವಂತನನ್ನು ಅರ್ಘ್ಯ, ಪಾದ್ಯಗಳಿಂದ ಮಾತ್ರವಲ್ಲ; ನೈವೇದ್ಯ ಸಮರ್ಪಿಸಿದರೂ 'ಮಧ್ಯೇ ಮಧ್ಯೇ ಪಾನೀಯ'ವನ್ನು ಸಮರ್ಪಿಸಲೇಬೇಕು. ಬಲಿಚಕ್ರವರ್ತಿಯು ವಾಮನನಿಗೆ ಮೂರು ಹೆಜ್ಜೆಗಳ ಭೂಮಿಯನ್ನು ದಾನವಾಗಿ ಅರ್ಪಿಸಿದ ಕಥೆ ಲೋಕಪ್ರಸಿದ್ಧವೇ ಆಗಿದೆ. ಈ ದಾನವು ಪೂರ್ಣವಾಗಬೇಕಾದರೆ ಕಮಂಡಲುವಿನ ಜಲಧಾರೆ ಬೇಕಾಯಿತು. ಭಗವಂತನಿಗೆ ಜಲಧಾರೆ ಎರೆಯಲು ಅಡ್ಡಿಪಡಿಸಿದ್ದರಿಂದ ಶುಕ್ರಾಚಾರ್ಯರು ಕಣ್ಣನ್ನು ಕಳೆದುಕೊಂಡರು. ಜಲಧಾರೆಯಿಂದ ದಾನವು ಪೂರ್ಣಕೆಯಾದಮೇಲೆ ತೃಪ್ತನಾದ ನಾರಾಯಣನು ಬಲಿಗೆ ರಸಾತಲದ ಅಧಿಪತ್ಯವನ್ನು ಮಾತ್ರವಲ್ಲದೆ ಕಲ್ಪಾಂತರದಲ್ಲಿ ಇಂದ್ರನಾಗುವ ಪದವಿಯನ್ನೂ ಸಹ ಅನುಗ್ರಹಿಸಿದನು. ಅಷ್ಟೇ ಅಲ್ಲದೆ - "ಬಲಿರ್ವಿಭೀಷಣೋಭೀಷ್ಮಃ" - ಎಂದು ಇಂದಿಗೂ ಸ್ಮರಿಸಲ್ಪಡುವ ಪರಮಭಾಗವತ ಪದವಿಯನ್ನು ಕೊಟ್ಟನು.

## ಭಕ್ತಿ ಸೌಲಭ್ಯ :

ಭಗವಂತನಿಗೆ ಅರ್ಪಿಸಲು ನನ್ನಲ್ಲೇನಿದೆ? - ಎಂದು ಬಡವನಾಗಿರುವ ಭಕ್ತನು ಚಿಂತಿಸುವಂತಾಗಬಾರದೆಂದೇ ಪ್ರಜಾಕೋಟಿಯ ತಂದೆಯಾಗಿರುವ ಭಗವಂತನು ಪತ್ರಂ - ಪುಷ್ಪಂ - ಫಲಂ - ತೋಯಂ - ಎಂಬ ಸೌಲಭ್ಯ ನೀಡಿದನು. ಉಳ್ಳಂತಹ ಭಕ್ತರು ಭಕ್ತಿಪಾರಮ್ಯದಿಂದ ಭಗವಂತನಿಗೆ ಮಂದಿರವನ್ನೇ ಕಟ್ಟಿಸಲಿ; ಕನಕರತ್ನಾಭರಣಗಳಿಂದ ಅಲಂಕರಿಸಿ ಕಣ್ಣಹಬ್ಬವನ್ನೂ ಮಾಡಲಿ. ಆದರೆ ಪತ್ರ - ಪುಷ್ಪ - ಫಲ - ತೋಯ - ಎಂದಿರುವುದರಿಂದ ಅವಷ್ಟನ್ನೇ ಅರ್ಪಿಸಿ ಲುಬ್ಧರಾಗತಕ್ಕದ್ದಲ್ಲ. ಆದ್ದರಿಂದಲೇ ಅರ್ಪಣೆಯಲ್ಲಿ ಭಕ್ತಿಪಾರಮ್ಯದ ನಿಬಂಧನೆಯನ್ನು ಭಗವಂತನು ವಿಧಿಸಿದ್ದಾನೆ.

ಸಿರಿತನವಂತೂ ನಮಗಿಲ್ಲ - ಸರಿಹೋಯಿತು. ಪತ್ರಾದಿಗಳಿಂದ ಭಗವಂತನನ್ನು ಸಂತೃಪ್ತಿಗೊಳಿಸಿ ಉದ್ಧಾರವಾಗಬಹುದು. ಒಂದೊಮ್ಮೆ ಪತ್ರ - ಪುಷ್ಪ - ಫಲ - ತೋಯಗಳಲ್ಲಿ ಯಾವುದೊಂದೂ ಇಲ್ಲದೆ ಹೋಗುವ ಸಂದರ್ಭಕ್ಕೆ ಭಕ್ತಿಮಾತ್ರವೇ ಸಾಕಾಗುವುದಿಲ್ಲವೇ ? - ಎಂಬ ಜಿಜ್ಞಾಸೆ ಏಳುತ್ತದೆ. ಇಂತಹ ಸಂದೇಹಕ್ಕೆ ಎಡೆಯೇ ಇಲ್ಲ. ಇಲ್ಲಿ ಪುರಂದರದಾಸರ ಒಂದು ಬೋಧ ಗೀತ ನೆನಪಾಗುತ್ತದೆ-

ಇಲ್ಲದಿದ್ದರೆ ಚಿಗುರು ಎಲೆ,
ಇಲ್ಲದಿದ್ದರೆ ಮುಗುಳು ಕೆನೆ,
ಇಲ್ಲದಿದ್ದರೆ ಬೇರಿನ ಮಣ್ಣು,
ಇಲ್ಲದಿದ್ದರೆ ತುಳಸೀ
ತುಳಸೀ ಎಂದು ಕೂಗಿದರೆ ಸಾಕು,
ಪುರಂದರ ವಿಠಲನು ಪೂಜೆಯ ಕೊಂಬ



# ಶ್ರೀನಿವಾಸ ಕಲ್ಯಾಣ



ಕೆ. ಸುಬ್ಬಾರಾವ್.

ಸಪ್ತಗಿರಿ ಪತ್ರಿಕೆಯ ಪ್ರಥಮ ಹಾಗೂ ಪೂರ್ವ ಸಂಪಾದಕರಾದ ಕಾಟ್ರಪಾಟಿ ಸುಬ್ಬರಾವ್ ಅವರು ಬರೆದ ತೆಲುಗು ನಾಟಕ ಶ್ರೀನಿವಾಸ ಕಲ್ಯಾಣ. ಭಗವದ್ಗೀತೆಯ ಸರಳ ವ್ಯಾಖ್ಯಾನ, ಧರ್ಮದೀಪಿಕಲು ಮೊದಲಾದ ಶ್ರೇಷ್ಠ ವೈಚಾರಿಕ ಕೃತಿಗಳ ಕರ್ತೃವಾದ ಅವರಿಗೆ ಪುರಾಣ ನಾಟಕ ರಂಗದಲ್ಲಿಯೂ ಆಸಕ್ತಿ ಹೆಚ್ಚಾಗಿದ್ದಿತು. 'ಶ್ರೀನಿವಾಸ ಕಲ್ಯಾಣ' ೧೯೪೭ ರಚಿತವಾಗಿ ಹಲವುಬಾರಿ ಪ್ರಯೋಗವಾಗಿ ಪ್ರದರ್ಶಿತವಾಗಿದ್ದು ಪ್ರಸಿದ್ಧವಾಗಿದೆ. ಸಾಗರ್ ಕಾವ್ಯನಾಮದ ಶ್ರೀ ಟಿ. ಎಲ್. ಸುಬ್ಬರಾವ್ ಈ ನಾಟಕ ರಚನೆಯಲ್ಲಿ ಕೆ. ಸುಬ್ಬರಾಯರಿಗೆ ನೆರವು ನೀಡಿದ್ದಾರೆ. ಅವರ ಅನುವಾದವನ್ನಿಲ್ಲಿ ಪ್ರಸ್ತುತಪಡಿಸಲಾಗಿದೆ. ಅನುವಾದಕರು ಶ್ರೀಮತಿ ಎಸ್. ವಿ. ಹೇಮಾವತಿ.

## ಅಂಕ - ೧
## ಒಂದನೆಯ ರಂಗ

(ಸೆರೆಮನೆಯಲ್ಲಿ ಅನ್ನಮಾಚಾರ್ಯ ಒಂದು ಶಿಲಾವೇದಿಕೆಯ ಮೇಲೆ ಕುಳಿತಿದ್ದಾನೆ. ಕೈಕಾಲುಗಳಲ್ಲಿ ಸರಪಳಿಯ ಬಂಧನವಿರುತ್ತದೆ.)

ಅನ್ನಮಾಚಾರ್ಯ : ಆಹಾ! ಶೇಷಶೈಲವಾಸಾ! ಚಿನ್ಮಯರೂಪಾ! ಶ್ರೀ ವೆಂಕಟೇಶ್ವರ ಪ್ರಭುವೇ! ನಿನ್ನ ದಾಸನಿಗೆ ಇಂದು ಇದೆಂಥ ಸ್ಥಿತಿ? ನಿನ್ನ ದಿವ್ಯ ಪಾದಾರವಿಂದಸಂಕೀರ್ತನತತ್ಪರನಾದ ನಾನು ಹಾಡಿದ ಹಾಡೆಲ್ಲ ಪರಮಗಾನವೆಂದೂ, ಆಡಿದ ಮಾತೆಲ್ಲ ಅಮೃತ ಕಾವ್ಯವೆಂದೂ - ಜನ ಸಾವಿರ ನಾಲಿಗೆಯಿಂದ ಹೊಗಳುವಂತಹ ದಿವ್ಯ ಕವಿತಾ ಶಕ್ತಿಯನ್ನು ಕಲ್ಪಿಸಿದ ನಿನ್ನ ಕೃಪಾನವನೀತ ಇಂದಿಗೆ ಕರಗಿ ಹೋಯಿತೇ? ಇಲ್ಲ, ನನ್ನ ಪೂಜೆಯಲ್ಲಿ ಲೋಪವೋ? ಅಥವಾ ನನ್ನ ಸಂಚಿತಪಾಪವೋ? ನಿನ್ನ ಮೊನ್ನೆಯವರೆಗೆ ಬಾಲ್ಯದ ಗೆಳೆಯನೆಂದೂ, ಚಕ್ರಿ ಮನ್ನಣೆಯಿಂದ ಕ್ರೀಡಿ ಭೂಚಕ್ರವನ್ನಾಳಿದಂತೆ ನಿಮ್ಮನೆರವಿನಿಂದ ನನ್ನ ಪಾಲಿಗೆ ಬಂದ ಭೂಮಿಯನ್ನೆಲ್ಲ ಏಕ ಚಕ್ರವಂತೆ ಆಳುವೆನೆಂದೂ, ನಮ್ಮೂರಿಗೆ ಬಂದು 'ನಮಗೆ ಬುದ್ಧಿ ಹೇಳಿ, ನಮ್ಮ ಪೂಜೆಯನ್ನು ಕೈಗೊಂಡು ನಮ್ಮನ್ನು ರಕ್ಷಿಸಿ' ಎಂದೂ, ದೀನನಾಗಿ ದೇಡಿ, ಈ ದಾಸನೇರಿದ ಪಲ್ಲಕ್ಕಿಯನ್ನು ಭೃತ್ಯನಂತೆ ಓಲೈಸಿದ ಈ ನರಸಿಂಹ ನರನಾಥನು, ಇಂದು ನಿನ್ನ ಹೊಗಳಿದ ಬಾಯಲ್ಲಿ ತನ್ನ ಶ್ಲಾಘಿಸದೇಡಲು, ಹರಿಮುಕುಂದನನ್ನು ಕೊಂಡಾಡಿದ ನನ್ನ ನಾಲಿಗೆ ನರರನ್ನು ಕೊಂಡಾಡದೆಂದು ಹೇಳಲು, ಸಲಿಗೆಯನ್ನು ಮರೆತು ಕಾಲು ಕೆರೆಯುತ್ತ ಜಗಳವಾಡಿ, ನನಗೀ ಸಂಕೋಲೆ ತೊಡಿಸಲು -- ಇನ್ನೇನು ಹೇಳುವುದು.

ದೇವಾಧಿದೇವ ನಿನ್ನನ್ನು ಭಕ್ತ ಸುಲಭನೆನ್ನುವರಲ್ಲ! ಮತ್ತಿದು ನನ್ನ ಭಕ್ತಿಗೆ ಪರೀಕ್ಷೆಯೇ? ಅಥವಾ ನಿನ್ನ ಆಪ್ತರಿಗೆ ಇದೇ ರಕ್ಷೆಯೋ?

ತವದಾಸರ ಭಂಗಗಳ ನೀ ನೋಡು ಬಾರಾ
ಯಾವುದ ನೋಡುವೆ ನಿನ್ನ ನೆಚ್ಚರಿಸದೇಕೇ?
ಪಾಲ ಸಮುದ್ರದೊಳು ಪವಡಿಸಿದ ನಿನಗೆ
ದೀನರಾಗಿ ಸುರರು ಮೊರೆಯಿಟ್ಟುವೊಲು
ಕಾಲದೊಳು ನಾವ್ ನರರು ಬಿನ್ನಯಿಸಿದವು
ಏಕೆ ನಿದ್ರಿಸಿರುವೆ ನಮ್ಮನಿಂತೆ ಕಾಯಬಾರದೇ?
|| ತವದಾಸ ||

ದ್ವಾರಕಾ ನಗರಿಯಲಿ ಲೆತ್ತವಾಡುವ ನಿನಗೆ
ಓರಂತೆ ದ್ರೌಪದಿ ತಾನು ಮೊರೆಯಿಟ್ಟಂತೆ
ಘೋರದ ರಾಜಸಭೆಗಳಲಿ ಕುಂದಿ ಬಿನ್ನೈಸಿದೆವು
ಪರಾಕು ಮತ್ತಾವುದು ನಿನಗೆ, ಕಾಯಬಾರದೆ
|| ತವದಾಸ ||

ತಳಿರ ವೈಕುಂಠದಲಿಂದಿರೆಯೊಡನಿದ್ದ ನಿನಗೆ
ಗೋಳಾಡಿ ದಿಗ್ಗಜವು ಮೊರೆಯಿಟ್ಟಳುವಂತೆ
ಸಲುಗೆಯಲಿ ನಮ್ಮ ಕೋರಿಕೆಗಳ ಬಿನ್ನೈಸಿದೆವು
ಕೇಳಿ ಶ್ರೀ ವೆಂಕಟೇಶನೆ ದೇಗ ಕಾಯಬಾರದೇ
|| ತವದಾಸ ||

ಸ್ವಾಮಿ - ಸಂಕೋಲೆ ತೊಡಿಸಿದ ವೇಳೆ, ಸಾಲಿಗರು ಆರಕ್ಷೆಯಿಟ್ಟು ನಿಲ್ಲಿಸಿದ ವೇಳೆ, ಸಾಯಬಡಿವ ಸಂಕಲ್ಪದ ವೇಳೆ, ವೆಂಕಟೇಶ ನಾಮವೇ ಬಿಡಿಸುವ ಗತಿಯಲ್ಲದೆ ಮಂಕುಬುದ್ಧಿ ಹೊರಳಿದರು ಮತ್ತಿಲ್ಲ ಮುಕುತಿ.....

(ಕೈಯೆತ್ತಿ ಸ್ವಾಮಿಗೆ ನಮಿಸುವ ಪ್ರಯತ್ನದಲ್ಲಿರುವಂತೆ ಸಂಕೋಲೆಗಳು ಕಳಚಿಬೀಳುವುವು. ಕೂಡಲೇ ಅನ್ನಮಯ್ಯ ಕಾಲಿನ ಸರಪಳಿಯಿಂದ ಬಿಡಿಸಿಕೊಂಡು ನಿಲ್ಲುತ್ತಾನೆ.)

ದೇವಾ! ನನ್ನ ಮೇಲೆ ನಿನ್ನ ಕೃಪಾಮೃತ ಧಾರೆಯನ್ನು ವರ್ಷಿಸಿ ನನ್ನನ್ನು ಮುಕ್ತಗೊಳಿಸಿ ಭಕ್ತ ಸುಲಭನೆಂಬ ಮಾತನ್ನು ಮತ್ತೊಮ್ಮೆ ಸತ್ಯಗೊಳಿಸಿದೆ. ನಿನ್ನ ದಯೆಯನ್ನು ಏನೆನ್ನಲಿ?

ಸಾರುವೆ ನಿಮುವೆ ಸತ್ಯವು ಕಾಣೊ
ಸೇವಿಸಿದರೀತನ ಕೇಡುಗಳಿಲ್ಲ || ಸಾರುವೆ ||

ಪರಿಯನೊಲ್ಲದವರಿರಲಾರರು ಕಾಣೊ
ಸುರರೆಲ್ಲರು ಈತನ ದಾಸರು ಕಾಣೊ
ಪರಮಾತ್ಮನೀತನೆ ಪ್ರಾಣವು ಕಾಣೊ
ಮರೆತು ಮರೆತರೂ ಮತ್ತಿಲ್ಲವು ಕಾಣೊ
|| ಸಾರುವೆ ||

(ಅನ್ನಮಯ್ಯ ಅತ್ತಿಂದಿತ್ತ ತಿರುಗುತ್ತ ಹಾಡುವುದನ್ನು ಕೇಳಿದ ಕಾವಲಿನ ಭಟ ಒಳಕ್ಕೆ ಒಂದು ಹೆಜ್ಜೆ ಹಾಕಿ ನೋಡಿ-)

ಭಟ : ಅಮ್ಮಯ್ಯ! ದೊಡ್ಡವರಿಗೆ ದೆವ್ವ ಹಿಡಿದಿದೆ. ಮಹಾರಾಜರಿಗೆ ಮನವಿ ಮಾಡಬೇಕು. (ಹೊರಕ್ಕೆ ಓಡುತ್ತಾನೆ)

ಅನ್ನಮಯ್ಯ ಹಾಡು ಮುಂದುವರೆಸುತ್ತಾನೆ.

(ನರಸಿಂಹರಾಯ ಮಂತ್ರಿ ಸಾಮಂತರೊಡನೆ ಪ್ರವೇಶಿಸುತ್ತಾನೆ.)

ನರಸಿಂಹ : ಮಹಾತ್ಮಾ! ಶರಣು! ಶರಣು! ತಮ್ಮ ಚಿಕ್ಕಂದಿನ ಗೆಳೆಯನಾಗಿದ್ದೂ ತಮ್ಮ ಭಕ್ತಿ ಪ್ರಪತ್ತಿಗಳನರಿತವನಾಗಿದ್ದೂ, ಪರಮಾತ್ಮಾನುಗ್ರಹ ಪಾತ್ರರಾದ ತಮ್ಮನ್ನು ಗರ್ವಾಂಧಕಾರದಿಂದ ಹತ್ತೂ ಜನರೆದುರಿಗೆ ಅವಮಾನಿಸಿ, ಕೈಕೋಳ ತೊಡಿಸಿ ಸೆರೆಯಲ್ಲಿಟ್ಟ ನನ್ನ ಅಜ್ಞಾನವನ್ನು ಮನ್ನಿಸಿ.

ಅನ್ನಮಾಚಾರ್ಯ : ಮಹಾರಾಜಾ! ನಮ್ಮಲ್ಲಿನ ಒಳಿತು ಕೆಡುಕುಗಳಿಗೆ ನಾವು ನಿಮಿತ್ತ ಮಾತ್ರರು. ಮುರವೈರಿಯನ್ನೋಲೈಸುವರ ದಂಡಿಸಬಾರದು. ಭಕ್ತನು ನೊಂದಿರೆ ಭಗವಂತ ನೋಯುವ - ಈ ಮಾತನ್ನು ಮನದಲ್ಲಿಟ್ಟುಕೋ.

ನರಸಿಂಹ : ಭಾಗವತೋತ್ತಮಾ! ತಮ್ಮ ಮಾತು ನನಗೆ ಶಿರೋಧಾರ್ಯ. ಭಕ್ತಿಗಿಷ್ಟು ಬಲವುಂಟೆಂಬುದನ್ನು ತಿಳಿಯದಾದೆ. ತಾವು ಅನುಷ್ಠಿಸುವ ಮಂತ್ರವನ್ನು ನನಗೂ ಅನುಗ್ರಹಿಸಿ ಎಂದು ಬೇಡುವೆ.

ಅನ್ನಮಾಚಾರ್ಯ : (ಮುಗಳ್ನಗುತ್ತ) ಮಹಾರಾಜಾ! ಮತ್ತೆ ಇನ್ನೊಂದು ರೀತಿಯ ಭ್ರಾಂತಿಯಲ್ಲಿ ಬಿದ್ದಿರಿ. ಮನಃಪೂರ್ವಕ ಮಾಧವನನ್ನು ಸ್ಮರಿಸುವುದಕ್ಕಿಂತ ಮತ್ತೊಂದು ಮಂತ್ರ ಬೇಕಿಲ್ಲ. ಎಂತಲೇ ಸರ್ವರೂ ಸುಲಭದಲಿ ಮುಕ್ತರಾಗಲು ಅನುಕೂಲವಾಗುವಂತೆ ಕಲಿಯುಗದಲ್ಲಿ ಆ ವೈಕುಂಠನೇ ವೆಂಕಟೇಶನಾಗಿ ನೆಲೆಸಿದ್ದಾನೆ.

ನರಸಿಂಹ : ಭಕ್ತ ಶಿಖಾಮಣಿ, ಮಧುವೈರಿಯ ಕಥೆಯೆಷ್ಟು ಕೇಳಿದರೂ ಒಂದಕ್ಕಿಂತ ಒಂದು ಮಧುರತರವಾಗಿರುತ್ತದೆ. ವೈಕುಂಠನು ವೆಂಕಟೇಶನಾದ ಮಧುರಕಥೆಯನ್ನು ಕೇಳುಗರ ಹಬ್ಬದಂತೆ ತಮ್ಮ ಬಾಯಿಂದ ಕೇಳಬಯಸುವೆ.

ಅನ್ನಮಾಚಾರ್ಯ : ವೆಂಕಟೇಶನನ್ನು ಕುರಿತಾಡುವುದೇ ಸಾವಿರ ವರಗಳೆಂದು ಭಾವಿಸುವೆ. ಹಾಗೇ ಆಗಲಿ ಕೇಳು ಹಿಂದೊಮ್ಮೆ...

ತೆರೆ.....

## ಎರಡನೇ ರಂಗ

(ಆಕಾಶ ಮಾರ್ಗದಲ್ಲಿ ನಾರದ ಹಾಡುತ್ತ ಪ್ರವೇಶಿಸುತ್ತಾನೆ)

ದೇವಾ ನಮೋ ದೇವಾ
ಪಾವನ ಗುಣಗಣ ಭಾವಾ || ದೇವಾ ||

ಜಗದಾಧಾರ ಚತುರ್ಭುಜ
ಗಗನ ನೀಲ ಮೇಘಶ್ಯಾಮ
ನಿಗಮ ಪಾದಯುಗ ನೀರಜನಾಭ
ಅಗಣಿತ ಲಾವಣ್ಯಾನನ || ದೇವಾ ||

ಘನವೇದಾಂತೈರ್ಗಣನ ಉದಾರ
ಕನಕ ಶಂಖ ಚಕ್ರ ಕರಾಂಕ
ದಿನಮಣಿ ಶಶಾಂಕ ದಿವ್ಯಲೋಚನ
ಅನುಪಮ ರವಿಬಿಂಬಾಧರ || ದೇವಾ ||

ಭಾವಜ ಕಂಜಭವ ಜನಕಾ
ಶ್ರೀ ವನಿತಾ ಹೃದಯೇಶ
ಶ್ರೀ ವೈಕುಂಠ ನಗರ ವಿಹಾರಾ
ಪಾವನ ಗುಣಗಣ ಭಾವ || ದೇವಾ ||

(ಹಾಡು ಮುಗಿಯುವ ಹೊತ್ತಿಗೆ ಭೂಲೋಕ ಕಂಡುಬರುತ್ತದೆ. ಭೃಗುವು ಆಸೀನನಾಗಿ ಶಿಷ್ಯರಿಗೆ ವೇದಗಳ ವಿವರಣೆ ನೀಡುತ್ತಿರುತ್ತಾನೆ.)

ನಾರದ : ನಾರಾಯಣ, ನಾರಾಯಣ, ಮಹರ್ಷಿಗಳಿಗೆ ಪ್ರಣಾಮಗಳು.

ಭೃಗು : (ಅವಸರದಿಂದ ಎದ್ದು ನಿಂತು ಪ್ರಣಾಮ ಸಲ್ಲಿಸಿ) ದೇವರ್ಷಿಗಳಿಗೆ ಘನಸ್ವಾಗತ. ಎಷ್ಟು ದಿನವಾಯ್ತು, ಬನ್ನಿ ಕುಳಿತುಕೊಳ್ಳಿ.

ನಾರದ : ಮಹರ್ಷಿ! ನಿಜಕ್ಕೂ ನಿಮ್ಮ ಆದರದಿಂದ ನಾವು ವಶೀಕೃತರಾಗಿ, ಸದಾ ನಿಮ್ಮ ಬಳಿಯೇ ಇರಬೇಕೆನಿಸುತ್ತಿದೆ (ಆಸೀನ ನಾಗುವನು).

ಭೃಗು : ಎಂಥ ಮಾತು! ತ್ರಿಲೋಕ ವಿಶೇಷಜ್ಞ, ಬ್ರಹ್ಮಮಾನಸಪುತ್ರರಾದ ತಾವು ನಿಜವಾಗಿ ಇಲ್ಲಿಯೇ ಇರುವೆನೆಂದರೆ ಅದಕ್ಕಿಂತ ಬೇರೆ ಭಾಗ್ಯವೇನಿದೆ. ಇಷ್ಟಕ್ಕೂ ಎಲ್ಲಿಂದ? ಎಲ್ಲಿಗೆ?

ನಾರದ : (ಕಿರುನಗೆಯಿಂದ) ಮುನಿಗಳ ಜಿಜ್ಞಾಸೆ ಮೆಚ್ಚತಕ್ಕದ್ದೆ. ಎಲ್ಲಿಗೆ ಎಂಬುದು ತಿಳಿಯದಾದರೂ ಬಂದದ್ದು ಮಾತ್ರ ಪಾಪನಾಶನಾಚಲದಿಂದ.

ಭೃಗು : (ಆಲೋಚಿಸಿ) ಪಾಪನಾಶನಾಚಲವೇ? ಹೆಸರು ಕೂಡ ಕೇಳಿದಂತಿಲ್ಲ. ದೇವರ್ಷಿಗಳು ಸ್ವಲಸ್ವ ವಿವರಿಸಿದರೆ ಧನ್ಯ.

ನಾರದ : (ಅಚ್ಚರಿಪಡುತ್ತ) ನಿಜವಾಗಿ ತಿಳಿಯದೇ ? ಆ ಘನತೆ ನನಗೆ ಸಿಗಲಿ ಎಂಬ ಉದ್ದೇಶವಲ್ಲದ. ಆದರೂ ಕೇಳಿದಿರಿ ಎಂದು ಯಥಾಶಕ್ತಿ ವಿವರಿಸುವೆ.

ಭೂಲೋಕದಲ್ಲಿ ವಿಂಧ್ಯಪರ್ವತಕ್ಕೆ ದಕ್ಷಿಣದಲ್ಲಿ ಪೂರ್ವಸಮುದ್ರದ ಸಮೀಪದಲ್ಲಿ ದಂಡಕಾರಣ್ಯದಲ್ಲಿ ಪಾಪನಾಶನಾಚಲ ಪಂಕ್ತಿಯಿದೆ. ಇದು ಶ್ರೀ ಭೂ ಸಹಿತ ಶ್ರೀಮನ್ನಾರಾಯಣನ ಕ್ರೀಡಾಶೈಲವಾದ ಪವಿತ್ರ ಕ್ಷೇತ್ರ. ಇನ್ನು ಈ ಕ್ಷೇತ್ರಕ್ಕಿರುವ ನಾಮಾದಿ ವಿಶೇಷಗಳೆಂದರೆ-

ಕೃತಯುಗದಲ್ಲಿ ವೃಷಭಾಚಲವೆಂದೂ, ತ್ರೇತಾಯುಗದಲ್ಲಿ ಅಂಜನಾಚಲವೆಂದೂ, ದ್ವಾಪರದಲ್ಲಿ ಶೇಷಾಚಲವೆಂದೂ, ಮುಂದೆ ಬರುವ ಕಲಿಯುಗದಲ್ಲಿ ವೆಂಕಟಾಚಲವೆಂದೂ ಅಣುವಣುವೂ ಒಂದೊಂದು ಸಾಲಿಗ್ರಾಮವಾಗಿ ಅರಳುತ್ತಿದೆ ಈ ಮಹಾನಗ. ಇಂದ್ರ, ಸ್ಕಂಧ ಮೊದಲಾದ ದೇವತಾಶ್ರೇಷ್ಠರೇ ಅಲ್ಲದೆ, ಸನಕ ಸನಂದನ ಸನತ್ಕುಮಾರರಾದಿಯಾದ ತಪಸ್ವಿಗಳು, ದಶರಥ, ಶ್ರೀರಾಮ ಪಾಂಡವರಾದಿಯಾದ ರಾಜಶೇಖರರು ಎಷ್ಟೋ ಮಂದಿ ಶ್ರೀಮನ್ನಾರಾಯಣನ ದರ್ಶನಕ್ಕೆಂದು ತಪಸ್ಸು ಮಾಡಿದ ಈ ಪುಣ್ಯಕ್ಷೇತ್ರವನ್ನು ಆದಿಶೇಷನಾದರೂ ವರ್ಣಿಸಲಾರ ಎಂದರೆ ನಾನೆಷ್ಟರವ!

ಭೃಗು : ಧನ್ಯ! ಮಹಾನುಭಾವ! ಧನ್ಯ! ತಮ್ಮ ದಯೆಯಿಂದ ಇಂದು ಶ್ರೀಧಾಮನು ನಮಗೆ ಹತ್ತಿರನಾದ. ಆ ಕ್ಷೇತ್ರವನ್ನು ಈಗಲೇ ದರ್ಶಿಸಿ ತೃಪ್ತನಾಗುವೆ. (ಹೊರಡ ತೊಡಗುವನು)

ನಾರದ : (ತಡೆಯುತ್ತ) ಮಹರ್ಷಿಗಳು ಅಪ್ರತಿಮಾನ ತಪೋಬಲ ಸಂಪನ್ನರು, ಸಾಕ್ಷಾತ್ ವಿಷ್ಣು ಅಂಶಜರಾದ್ದರಿಂದ ತಮಗೆ ಸಾಧ್ಯವಾಗಬಹುದು. ಆದರೆ ಮುಂದೆ ಬರುವುದು ಕಲಿಕಾಲ. ಆಗ ಪುರುಷೋತ್ತಮನು ಹೀಗೆ ಕಾಣಿಸಿಕೊಳ್ಳುವುದು ಸಂಶಯವೇ. ಸಾಂಪ್ರದಾಯಿಕವಾದ ಕರ್ಮಾನುಷ್ಠಾನಗಳಿಂದ ಅರ್ಥಕಾಮಾದಿಗಳ ಬಗ್ಗೆ ಆಸೆ ಪ್ರಬಲವಾಗಿ ಆಹಾರ, ನಿದ್ರಾ, ಭಯ ಮೈಥುನಗಳಲ್ಲಿಯೇ ಆಸಕ್ತಿ ಹೊಂದಿದ ಕಲಿಜನರಿಗೆ ಇಂತಹ ಶಕ್ತಿ ಹೇಗೆ ಎಲ್ಲಿಂದ ಬರುತ್ತದೆ. ಅವರಿಗಾರು ದಿಕ್ಕು? ಇದು ನನ್ನ ಯೋಚನೆ.

ಭೃಗು : (ವಿಷಾದದಿಂದ) ಹಾಗಾದರೆ ಕಲಿದೋಷಗಳಿಗೆ ಮಾನವ ಕುಲ ಬಲಿಯಾಗದೇ ಕೇನು? ಪಾಪಾಂಬುಧಿಯಲ್ಲಿ ಪತನವಾಗದೇ ಕೇನು? ಅನಾದಿಯಾದ ಅನಂತ ತಪೋನಿಷ್ಠಾಗರಿಷ್ಠರಾದ ತಮ್ಮಂತಹವರ ಲೋಕ ಕಲ್ಯಾಣಾಕಾಂಕ್ಷೆ ವಿಫಲವಾಗದೇಕೇನು? ಪರಿಹಾರ ಮಾರ್ಗವೇ ಇಲ್ಲವೇ? ಇದ್ದರೆ ಅಪ್ಪಣೆ ಕೊಡಿಸಿ. ನಾನು ನೆರವೇರಿಸಲು ಸಿದ್ಧ.

ನಾರದ : ಮುನಿಸತ್ತಮರ ಆವೇಶ ಆತುರ ಅವಗತವಾಯ್ತು. ಆದರೂ ಎಲ್ಲ ಕಾಲಬದ್ಧ. ಕಾದು ನೋಡುವುದಕ್ಕಿಂತ ಬೇರೆ ಉಪಾಯವಿಲ್ಲ. ನನಗೆ ಅಪ್ಪಣೆಕೊಟ್ಟರೆ ನಾನು ಹೋಗಿಬರುವೆ (ನಿಷ್ಕ್ರಮಿಸುವನು)

(ಭೃಗು ನಾರದನಿಗೆ ನಮಸ್ಕರಿಸಿ ಆತ ಹೊರಟ ದಿಕ್ಕನ್ನೇ ನೋಡುತ್ತ ನಿಲ್ಲುತ್ತಾನೆ)

(ತೆರೆ)

## ಮೂರನೆಯ ರಂಗ

(ಭೂದೇವಿ - ಆಭರಣಾಲಂಕೃತ ಸ್ತ್ರೀ ಮೂರ್ತಿ. ಶಿರದಲ್ಲಿ ಕಿರೀಟ, ಕೈಯಲ್ಲಿ ತ್ರಿಶೂಲ)

ಭೂದೇವಿ : ಪರಾತ್ಪರಾ! ಪತಿತಪಾವನ! ಎಂತಹ ದುಸ್ಥಿತಿಯನ್ನುಂಟುಮಾಡಿದೆ ನನಗೆ, ಸಪ್ತಸಾಗರಾವೃತಳಾಗಿ, ಜನಜೀವನಕಾರಣವಾದ ಅನೇಕ ನದನದೀ ಸಂಸೇವಿತ ಪೀಠಸ್ಥಳಾಗಿ, ಜನ ಸಂಪತ್ ಪ್ರದಾಯಕ ಅಷ್ಟೈಶ್ವರ್ಯಗಳಿಗೆ ತವರಾಗಿ, ಅನೇಕ ರಾಜನ್ಯ ಮಣಿ ಮಕುಟ ಕಾಂತಿ ಪ್ರದೀಪ್ತ ಪಾದಪಂಕೇರುಹಳಾಗಿ, ನಿನ್ನ ಅಗ್ರ ಮಹಿಷಿಯಾಗಿ, ನಿನ್ನ ಸೃಷ್ಟಿಯ ಚರಾಚರ ಜೀವ ಜಾಲಗಳಿಗೆಲ್ಲ ಆಧಾರ ಭೂತಳಾಗಿ ವಿರಾಜಿಸುತ್ತಿದ್ದ ನನಗೆ ಇಂದು ವಿಯೋಗ ಭಾರದಿಂದ ಎಂತಹ ವ್ಯಥೆಯುಂಟಾಗಿದೆ ಎಂಬುದನ್ನು ಗುರ್ತಿಸಲಾರೆಯೇನು? ನಿನ್ನ ಪಾದ ಸಂಸೇವನೆಗೆ ಯೋಗ್ಯಳಾಗಿದ್ದೂ, ಅಖಿಲ ಜೀವಕೋಟಿ ಸಂಭರಣ ಕರ್ತವ್ಯವನ್ನು ಹೊಂದಿ ನಿನಗೆ ದೂರವಾಗಿ ವಿಯೋಗವ್ಯಥೆಯನ್ನು ಸಹಿಸುತ್ತ, ದುಷ್ಟ ಸಂಹರಣಾರ್ಥ ನೀನು ಅವತರಿಸಿದಾ

ಗಲ್ಲಿ ನಿನ್ನ ಸಹಯೋಗದಿಂದ ಆತ್ಮಸಂತೃಪ್ತಿ ಪಡೆಯುತ್ತಿದ್ದೆ.

ಮೂಢರು, ಅಜ್ಞಾನಿಗಳು, ಜ್ಞಾನಿಗಳಾಗಿಯೂ ಇಂದ್ರಿಯ ಜ್ಞಾನ ಪರಿವೃತರಾದ ರಾಜಾಧಿರಾಜ ರಷ್ಟೋ ಮಂದಿ ಅವಿಭಾಜ್ಯರಾದವರನ್ನು ವಿಭಾಜ್ಯರೆಂದು ಭಾವಿಸಿ, ನಮ್ಮದು ನಮ್ಮದು ಎಂದು ಕಚ್ಚಾಟ ಮಾಡುವಾಗ ಬಾಲಚೇಷ್ಟೆಗಳು ಮಿತಿ ಮೀರಿ ಸ್ತುತಿ ಮೀರಿ, ಗತಿ ತಿಳಿಯದೆ ಒಬ್ಬರಿಗೊಬ್ಬರು ಹಿಂಸಕರಾದಾಗಲೋ, ಇಲ್ಲವೇ ಯಾವುದೋ ಒಂದು ಮಹತ್ತರ ಪ್ರಯೋಜನ ಬಯಸಿ ನಡೆಯುವ ಬೃಹತ್ ಕಾರ್ಯಕ್ರಮಗಳಲ್ಲಿಯೋ, ಯಾವುದೋ ಒಂದು ಅವತಾರದಲ್ಲಿ ಆಗಮಿಸಿ ನನಗೆ ಮನಶ್ಶಾಂತಿಯನ್ನು ನೀಡುತ್ತಿದ್ದೆ.

ಆದರಿಂದು ಅಂತಹ ಅವಕಾಶ ನನ್ನಿಂದ ದೂರವಾಗುತ್ತಿರುವಂತಿದೆ. ದ್ವಾಪರದ ನಂತರ ಪ್ರತ್ಯೇಕ ಅವತಾರ ಪ್ರಯೋಜನವಿಲ್ಲದ್ದರಿಂದ ನಿನ್ನ ದರ್ಶನ ಲಭಿಸುವುದೆಂಬ ಆಸೆ ನಶಿಸುತ್ತಿದೆ. ಇಂದು ನಿನ್ನನ್ನು ಎದುರಿಸಬಲ್ಲ ಉದ್ಧಟರೇ ಇಲ್ಲ. ಆದರೆ ಪಾಪಗಳೋ ಅನಂತವಾಗುತ್ತಿದೆ. ಸದಾಚಾರಗಳು ಸವೆದು ಹೋಗುತ್ತಿವೆ. ಲೋಕದಲ್ಲಿ ಮಾತೃ ಪಿತೃ ಭ್ರಾತೃ - ಹಂತಕರು. ಜಾರರು ಚೋರರಂತಹ ಸಮಾಜ ಘಾತುಕರ ಪ್ರಭಾವ ಹೆಚ್ಚುತ್ತಿದೆ. ಈ ಪಾಪ ದಾವಾಗ್ನಿ ಜ್ವಾಲೆಗಳನ್ನು ಎದುರಿಸಲಾಗದೆ, ಆರಿಸಲಾಗದೆ ನೋಯುತ್ತಿದ್ದೇನೆ.

ಇದುವಲ್ಲಿ ನಿನ್ನ ಚಾರಣಾರವಿಂದ ಸಂಸೇವನೆಯೇ ಲಭಿಸದಿದ್ದಲ್ಲಿ ನನ್ನ ಈ ದುಃಸಹವೇದನೆ ಎಂತಹ ಅನರ್ಥಗಳಿಗೆ ಪ್ರಾಣನಾಶಕ್ಕೆ ದಾರಿಯಾಗುವುದೋ ತಿಳಿಯದಾಗಿದ್ದೇನೆ. 'ಸರ್ವಂ ಸಹ' ಎಂದು ನೀನು ನೀಡಿದ ನಾಮಧೇಯ ಸಾರ್ಥಕವಾಗದೇನೋ ಎಂಬ ಸಂದೇಹ, ಭಯ. ಕರುಣಾಳು! ಕರಿವರದಾ! ನನ್ನ ಕಷ್ಟಗಳನ್ನು ದೂರಮಾಡಲು ಅವತರಿಸಿ ಬರಲಾರೆಯಾ.

ಪತಿತಪಾವನಂ-ಪಾಪನಾಶನಂ
ವೇದರಕ್ಷಕಂ-ಸೋಮಕಾಂತಕಂ
ಮಥಿತ ಸಾಗರಂ-ಮಂದರೋದ್ಧರಂ
ಧರ್ಮರಕ್ಷಕಂ-ದೈತ್ಯನಾಶಕಂ
ಜಲಚರಾಕೃತಿಂ-ದೇವಮಾಶ್ರಯೇ

ಭುವನ ವಾಹಕಂ-ಭವ್ಯಮಾನಸಂ
ಕಮಲ ಲೋಚನಂ-ಕನಕ ನೇತ್ರಘಂ
ದನುಜ ಮರ್ದನಂ-ಭೀಷಣಾಕೃತಿಂ
ಆರ್ತಿನಾಶಕಂ-ಅರ್ಧ ಮಾನವಂ
ನರಮೃಗಾಕೃತಿಂ-ದೇವಮಾಶ್ರಯೇ

ವೇದರಕ್ಷಕಂ-ವೇದ ಪಾರಗಂ
ತ್ರಿಪದ ವಿಕ್ರಮಂ-ಶಿಕ್ಷಿತಾಸುರಂ
ಚಂಡ ಕ್ರೋಧನಂ-ಖಂಡಿತ ಪ್ರದಂ
ಭೀಮ ವಿಕ್ರಮಂ-ಖಂಡನಾಕುರಂ
ದ್ವಿಜವರಾನನಂ-ದೇವಮಾಶ್ರಯೇ

ದಶರಥಾತ್ಮಜಂ-ಧರಣಿ ಜಾವರಂ
ದಶಮುಖಾಂತಕಂ-ಧರ್ಮರೂಪಿಣಂ
ನೀಲಮೋಹನಂ-ನಿತ್ಯಯವ್ವನಂ
ವೇಣು ಲೋಲುಪಂ-ಜ್ಞಾನ ಬೋಧಕಂ
ದಿವ್ಯ ಮಾನುಷಂ-ದೇವಮಾಶ್ರಯೇ

ದೌಷ್ಟ್ಯ ನಾಶಕ-ಧರ್ಮಧಾರಕ
ಕಲಿನಿರಾಸಕ-ಲೋಕರಕ್ಷಕ
ಬಹುಮುಖಾತ್ಮಕ-ಭಾವಯಾಮಿ ತ್ವಾಂ
ತುರಗವಾಹನ-ಪಾಹಿ ಪಾಹಿಮಾಂ

(ಭೂದೇವಿ ದುಃಖಿಸುತ್ತ "ಜಗದ್ರಕ್ಷಕಾ ಸ್ವಾಮಿ ಪಾಹಿಮಾಂ ಪಾಹಿ" ಎನ್ನುವಳು - ಸಿಡಿಲು ಬಡಿದ ಶಬ್ದ, ಮಿಂಚಿನ ಬೆಳಕು, ನಂತರ ಮಹಾವಿಷ್ಣುವಿನ ಛಾಯೆ ಹಿನ್ನಲೆಯ ತೆರೆಯ ಮೇಲೆ ಹಿಂದಿನಿಂದ ಮಾತು-)

ದೇವಿ ಸಂತೈಸಿಕೊ. ಅತಿ ತ್ವರೆಯಲ್ಲಿಯೇ ನಿನ್ನ ಮನೋವ್ಯಥೆ ದೂರವಾಗುತ್ತದೆ.

(ಭೂದೇವಿ ಎದ್ದು ನಿಂತು ಆ ಛಾಯಾರೂಪಕ್ಕೆ ನಮಸ್ಕರಿಸುವಳು)

(ತೆರೆ)

## ನಾಲ್ಕನೆಯ ರಂಗ

(ವೈಕುಂಠ. ಮಹಾವಿಷ್ಣುವು ಶೇಷ ಶಯನನಾಗಿರಲು ಮಹಾಲಕ್ಷ್ಮಿ ಆತನ ಪಾದಗಳನ್ನು ಒತ್ತುತ್ತಿರುವಳು.)

ವಿಷ್ಣು : ಆಹಾ! ಇಂದು ಶ್ರೀದೇವಿಯ ಮುಗುಳು ನಗೆಯಿಂದ ವೈಕುಂಠ ಬೆಳದಿಂಗಳ ದ್ವೀಪವಾಗಿದೆಯಲ್ಲ. ದೇವಿಗೆ ಅಷ್ಟೊಂದು ಮುದಾವಹವಾದ ಸಂಗತಿ ಯಾವುದೋ?

ಲಕ್ಷ್ಮಿ: ಲೋಕೈಕನಾಥರು ಕ್ಷಮಿಸಬೇಕು. ದೇವರಿಗೆ ಕೇಳಿಬರಲಿಲ್ಲವೊ ಏನೋ. ಭೂಲೋಕವಾಸಿಗಳ ಆರ್ತನಾದಗಳ ನಡುವೆಯೂ ತಮ್ಮ ಅವತಾರ ಗುಣಕೀರ್ತನೆಯನ್ನು ಕೇಳಿದ ನನಗೆ ವಿಚಿತ್ರವಾಗಿ ತೋರಿ ನಗೆಯುಕ್ಕಿತು. ಪ್ರಾಣೇಶ್ವರರ ಕ್ಷಮೆಯಿರಲಿ.

ವಿಷ್ಣು : ಇದರಲ್ಲಿ ವಿಚಿತ್ರವೇನಿದೆ. ದುಷ್ಟ ಶಿಕ್ಷಣ ಶಿಷ್ಟರಕ್ಷಣೆಯೇ ನಮ್ಮ ಕರ್ತವ್ಯವಾದ್ದರಿಂದ ಭಕ್ತರು ಅವತಾರ ಗುಣಗಾನ ಮಾಡುವುದು ಸಹಜವಲ್ಲವೇ!

ಲಕ್ಷ್ಮಿ : ಪ್ರಾಣೇಶ್ವರ! ತಮ್ಮ ಅನಂತಾದ್ಭುತ ದಿವ್ಯಾವತಾರಗಳಲ್ಲಿ ಸಾತ್ವಿಕವಾದವು ಅನೇಕವಿದ್ದರೂ ಕೇವಲ ದುಷ್ಟ ಶಿಕ್ಷಣದ ಹೆಸರಿನಲ್ಲಿ ಹಿಂಸೆಗೆ ಪ್ರತಿರೂಪವಾದ ಅವತಾರಗಳನ್ನೇ ಹೆಚ್ಚಿಗೆ ಸ್ಮರಿಸುವುದೇಕೆ? ಶಿಷ್ಟರಕ್ಷಣೆಯೆಂದರೂ ದುಷ್ಟ ಶಿಕ್ಷಣವೇ ಏನು?

ವಿಷ್ಣು : ಅಲ್ಲಿ ಸಂದೇಹವೇಕೆ?

ಲಕ್ಷ್ಮಿ : (ವಿಷ್ಣುವನ್ನು ಓರೆನೋಟದಿಂದ ನೋಡಿ ಕಿರುನಗೆಯಿಂದ) 'ಯಥಾ ದೇವಸ್ತಥಾ ಭಕ್ತಃ' ನಿಮ್ಮನ್ನು ಅನುಸರಿಸಿದಂತೆಯೇ ನಿಮ್ಮ ಭಕ್ತರ ಪೂಜೆಗಳೂ ಸಹ. ಸಾಧಾರಣ ಪುಣ್ಯಪಾಪಗಳು ತಮ್ಮ ನೆನಪಿನಲ್ಲಿ ಸುಳಿಯುವುದೇ ಇಲ್ಲವೆನ್ನಿಸುವುದು. ಅವತಾರ ಪ್ರಯೋಜನ ಮುಗಿದೊಡನೆಯೇ ತಾವು ಹೀಗೆ ಹಿಂತಿರುಗುವುದು, ಅತ್ತ ದೀನರು ಮೊರೆಯಿಡುವುದು ಮತ್ತೊಮ್ಮೆ ಅವತಾರ ಧರಿಸುವುದು. ಈ ಅವತಾರ ಚಕ್ರಭ್ರಮಣ ಹೀಗೆಯೇ ನಡೆಯುತ್ತಿರಬೇಕೆ ಪ್ರಭು?

ವಿಷ್ಣು : ಇಂದು ಶ್ರೀದೇವಿಗೆ ಭೂದೇವಿಯ ಬಗ್ಗೆ ಎಷ್ಟು ಕರುಣೆಯುಂಟಾಗಿದೆ. ನಮಗೆ ಯಾವುದೋ ಹೊಸ ರಂಗ ಸಿದ್ಧವಾಗುತ್ತಿದೆ. ಆದರೂ ದೇವಿ ಇದರಲ್ಲಿ ನಿನ್ನ ಮಾಯೆ ಕಡಿಮೆಯೇನಲ್ಲ. ನಿನ್ನ ಕೃಪೆಯ ಸಲಿಗೆಯಿಂದ ಅವರು ಅಹಂಕಾರಿಗಳಾಗಿ ಪ್ರಾಣಿಕೋಟಿ ವಿನಾಶಕ್ಕೆ ದಾರಿಯಾಗಿ ನಮಗೆ ವಿವಿಧಾವತಾರಗಳು ಅನಿವಾರ್ಯವಾಗುವುದಲ್ಲವೇ! ಇಲ್ಲಿ ನಮ್ಮ ದೋಷವೇನಿದೆ?

ಲಕ್ಷ್ಮಿ : ಆಹಾ! ದೇವ ದೇವನನ್ನು ಜಗನ್ನಾಟಕ ಸೂತ್ರಧಾರಿ ಎಂದೇಕೆ ಕರೆಯುವರೋ ಇಂದು ಅರ್ಥವಾಯಿತು. ಪರ್ವತದಿಂದ ಪರಮಾಣುವಿನವರೆಗೆ ವ್ಯಾಪ್ತವಾದ ಚರಾಚರ ಭೂತಜಾಲದಲ್ಲಿ ಅಂತರ್ಯಾಮಿಯಾಗಿರುವ ತಾವು ಜಗತ್ಕಲ್ಯಾಣಕ್ಕೆಂದು ನಾನು ನೀಡಿದ ಸಂಪದದಿಂದ, ಅತುಮಹಿಮೆಯನ್ನು ಬೆಳೆಯುವಂತೆ ಮಾಡಿ ಆಪತ್ತುಗಳನ್ನುಂಟುಮಾಡಿ ಅವರನ್ನೆಲ್ಲಾ ಸದೆಬಡಿದು ನನ್ನ ದೋಷವೇನು ಕರ್ಮ ಪರಿಪಾಕವೆನ್ನುವುದು ನಿಮಗೇ ಸಲ್ಲುತ್ತದೆ. ಒಂದು ವೇಳೆ ತಾವು ಹೇಳಿದ್ದೇ ನಿಜವಾದರೂ ಪ್ರಭು! ತಾವು ಭಕ್ತ ಪಕ್ಷಪಾತಿಗಳು ಎನ್ನುವುದಕ್ಕಿಂತ ಬಲವಂತರ 'ಕ್ಷಪಾತಿಗಳು ಎನ್ನುವುದು ನಿಶ್ಚಯ.

ವಿಷ್ಣು : ಇದೇನು ದೇವಿ ನೂತನಾಭಿಯೋಗ?

ಲಕ್ಷ್ಮಿ : ಪ್ರಾಣೇಶ್ವರರು ಕ್ಷಮಿಸಬೇಕು. ಭಕ್ತರ ವರ್ಣನೆಗಳನ್ನು ಕೇಳಿದಿರಲ್ಲ. ಪ್ರತಿಯವತಾರದಲ್ಲೂ ತಮ್ಮ ಪ್ರತ್ಯರ್ಥಿಗಳು ಅಪಾರ ತಪೋಬಲ ಸಂಪನ್ನರಾಗಿ, ದಿಕ್ಪಾಲಕರ ವರಗಳನ್ನು ಪಡೆದು ನಿಮ್ಮನ್ನು ಸರ್ವಾತ್ಮನಾ ದ್ವೇಷಿಸಿ, ತಮ್ಮಿಂದ ಮರ

ಣವನ್ನೊ, ಪರಾಜಯವನ್ನೊ ಹೊಂದಿ ಇತರರಿಗೆ ಸಾಧ್ಯವಾದ ಪದವಿಗಳನ್ನು ಪಡೆದರು. ಕಡೆಗೆ ತಾವು ಕ್ರೀಡಾಶೈಲವನ್ನು ಭೂಮಿಗಿಳಿಸಿ ಮಾಡದೇ ಕೆಂದಿದ್ದ ವಿನೋದ ಯಾತ್ರೆ ವೃಷಭಾಸುರ ವಧಯಾತ್ರೆಯಾಗಿ ಪರಿಣಮಿಸಿತಲ್ಲ. ಕಾಲಗತಿ ಕಾಲಸ್ವರೂಪರಾದ ತಮಗೆ ತಿಳಿಯದ್ದೇನಲ್ಲ. ಮತ್ತೆ ಇತ್ತ ಸ್ಪರ್ಧೆಗೂ ಅತ್ತ ಪುಣ್ಯವೃದ್ಧಿಗೂ ಅನರ್ಹರಾದ ಅನಂತ ಜೀವ ಕೋಟಿಗೆ ಎಲ್ಲಿ ಮುಕ್ತಿ? ಜನನ ಮರಣ ಸಂಸಾರ ಚಕ್ರಕ್ಕೆ ಬದ್ಧರಾಗಿ ಕಾಪಾಡು ಕಾಪಾಡು ಎಂದು ಮೊರೆಯಿಡುವುದಷ್ಟೇನೋ, ಅವರಿಗೆ ತರಣೋಪಾಯವೇ ಇಲ್ಲವೇ?

ವಿಷ್ಣು : ಓಹೋ ನಿನ್ನನ್ನು ಭೂದೇವಿ ಪೂರ್ತಿಯಾಗಿ ಆಕರ್ಷಿಸಿದಂತಿದೆ. ಇಲ್ಲವಾದಲ್ಲಿ ನಿನ್ನ ಬಾಯಲ್ಲಿ ಇಂತಹ ಮಾತುಗಳೇಕೆ? ಇಷ್ಟಕ್ಕೂ ದೇವಿಯ ಮನಸ್ಸು ಬಹಿರ್ಗತವಾಗಲಿಲ್ಲ?

ಲಕ್ಷ್ಮಿ: ಬೇರೇನಿದೆ ಪ್ರಭು! ಕಲಿ ಇಳೆಯನ್ನಾವರಿಸುತ್ತಿದೆ. ದುಷ್ಟ ನಿವಾರಣೆಗಿಂತ ದೌಷ್ಟ್ಯ ನಿವಾರಣೆಯ ಮಹಿಮೆಯ ಸೌಮ್ಯರೂಪವನ್ನು ಧರಿಸಿ ದೀನ ಜನರನ್ನು ಉದ್ಧರಿಸಲು ಬೇಡುವೆನು.

ವಿಷ್ಣು : ನಿಜವಾಗಿ ನೀನು ಧನದೇವಿ ಮಾತ್ರವೇ ಅಲ್ಲ. ದಯಾದೇವಿಯೂ ಹೌದು. ಆದರೆ ದೇವಿ ಕಾಲ ಕೂಡಿ ಬರಬೇಕಲ್ಲ. ಆಗಲೂ ಇಷ್ಟೇ ದಯಾಮಯಿಯಾಗಿಯೇ ಇದ್ದಲ್ಲಿ ಬೇರೇನು ಬೇಕು. ನಿನ್ನ ಅಭಿಮತವೇ ನಡೆಯಲಿ.

ಲಕ್ಷ್ಮಿ: ಧನ್ಯಳಾದೆ ಸ್ವಾಮಿ ಧನ್ಯಳಾದೆ.

(ತೆರೆ)

## ಅಂಕ - 2, ರಂಗ - 1

(ನಾರದ ಹಾಡುತ್ತ ಪ್ರವೇಶಿಸುತ್ತಾನೆ)

ಹಾಡು : ನಾರಾಯಣ ತೇ ನಮೋ ನಮೋ

ನಾರದ: ಆಹಾ! ಈ ಅರಣ್ಯ ಪ್ರಾಂತ್ಯವೆಷ್ಟು ರಮಣೀಯವಾಗಿದೆ. ಪ್ರಕೃತಿಯ ಜೀವಸತ್ವವನ್ನು ಒಟ್ಟಿಗೆ ಸಂಗ್ರಹಿಸಿದಂತಿದೆ. ಇಲ್ಲಿ ಯಾವುದೋ ಋಷ್ಯಾಶ್ರಮವಿರುವಂತಿದೆ. ಮಹರ್ಷಿಗಳ ದರ್ಶನ ಪುಣ್ಯಪ್ರದವಲ್ಲವೇ? ಅವರನ್ನು ದರ್ಶಿಸಿ ಮುಂದೆ ಸಾಗುವೆ. (ಆಲಿಸಿದವನಂತೆ) ಏನು ಕಲರವ? ಯಾವುದೋ ಯಾಗ ನಡೆಯುತ್ತಿರುವಂತಿದೆ. ಎಲ್ಲೂ ಕಾಲು ನಿಲ್ಲದ ನನಗೆ ನಿರೀಕ್ಷಿಸದೆ ದೊರಕಿದ ಅವಕಾಶವನ್ನು ಬಿಡಬೇಕೇಕೆ?

(ತೆರೆಯ ಮರೆಯಲ್ಲಿ ಧ್ವನಿ -
ಅನಂತಾಯಾ ಸ್ವಾಹಾ
ಅನಂತಾಯೇದಂ ನ ಮಮ
ಅನಂತ ವಿಭವಾಯ ಸ್ವಾಹಾ
ಅನಂತ ವಿಭವಾಯೇದಂ ನ ಮಮ
ಅನಂತ ಸ್ವರೂಪಾಯ ಸ್ವಾಹಾ
ಅನಂತ ಸ್ವರೂಪಾಯೇದಂ ನ ಮಮ
ಕಾಲಾಯ ಸ್ವಾಹಾ
ಕಾಲಾಯೇದಂ ನ ಮಮ
ಕಲ್ಮಷ ಹರಾಯಾ ಸ್ವಾಹಾ
ಕಲ್ಮಷ ಹರಾಯೇದಂ ನ ಮಮ

ನಾರದ : (ಆಶ್ಚರ್ಯದಿಂದ) ನಾರಾಯಣ! ನಾರಾಯಣ! ಏನಿದು ಯಾವ ದೇವತೆಗಾದರೂ ಗುಣವಿಶೇಷತೆಗಳಂತೆ ಹೇಳಬಲ್ಲ ಮಂತ್ರಗಳಿಂದ ಯಾಗವೇ? ಕೇವಲ ಗುಣವಿಶೇಷಣಗಳಿಂದಲೇ ಯಜ್ಞಫಲ ಭೋಕ್ತೃವನ್ನು ಹೇಗೆ ನಿರ್ಣಯಿಸಿದರೋ? ಇಲ್ಲೇನೋ ವಿಚಿತ್ರವಿದೆ. ಸರ್ವಜ್ಞಾನ ಗರಿಷ್ಠರಾದ ಮಹರ್ಷಿ ಸತ್ತಮರು ಕಾಮ್ಯ ಕರ್ಮಗಳಲ್ಲಿ ಯಜ್ಞ ಪುರುಷ ನಿರ್ಧಾರ ಮಾಡಲಾಗದ ರೀತಿಯಲ್ಲಿ ಗಣೋಪಾಸನೆ ಮಾಡುವುದೆ? ಇಲ್ಲವೇ ಫಲ ಭೋಕ್ತೃತ್ವಕ್ಕಾಗಿ ತ್ರಿಮೂರ್ತಿಗಳನ್ನು ಕಲಹದಲ್ಲಿ ತೊಡಗಿಸುವುದೇ? ಆಹಾ! ನಾರಾಯಣ ನಿನ್ನ ಲೀಲೆಗಳಿಗೆ ಮಹರ್ಷಿಗಳೂ ಮೋಸ ಹೋದರೇ? ಕಲಹಭೋಕ್ತನೆಂಬ ಹೆಸರು ಪಡೆದ ನನಗೂ ಹಸಿವಾಗಿದೆ. ನನ್ನ ಹಸಿವು ಈ ಕಲಿಜನ ಸಂತರಣಕ್ಕೆ ಮಾರ್ಗವಾಗದೆ? ಇನ್ನು ಸಮಿಧೆಯನ್ನೆಸೆದು ನೋಡುವೆ.

(ಹಿನ್ನೆಲೆಯ ತೆರೆ ಸರಿದು ಯಜ್ಞಶಾಲೆ ಕಂಡು ಬರುತ್ತದೆ)

ನಾರದ : (ಪ್ರವೇಶಿಸಿ) ಬ್ರಹ್ಮರ್ಷಿಗಳಿಗೆ ಪ್ರಣಾಮಗಳು.

ಅತ್ರಿ: ದೇವರ್ಷಿ! ಘನಸ್ವಾಗತ - ದಿವಿ ತಿರುಗುವ ಮಹಾತ್ಮರು ಈ ಭುವಿಗೇಕೆ ಆಗಮಿಸಿದರೋ! ಸುಮ್ಮನೆ ಬರುವುದಿಲ್ಲವಲ್ಲ!

ನಾರದ : ಅತ್ರಿಮಹರ್ಷಿ! ತ್ರಿಲೋಕ ಸಂಚಾರಿಯಾದ ನನಗೆ ತಮ್ಮ ಯಜ್ಞವನ್ನು ನೋಡುವ ಅಪೇಕ್ಷೆ. ಆದರೆ ನೋಡಿದ ನಂತರ ನನಗೊಂದು ಸಂದೇಹ. ಸತ್ರಯಾಗದಲ್ಲಿ ಸಮಸ್ಯೆ ಪರಿಹರಿಸಲ್ಪಡುವುದೆಂಬ ಸಂತಸದಿಂದ ಸಮಕ್ಷಮಕ್ಕೆ ಬಂದಿದ್ದೇನೆ.

ಭೃಗು : (ಕಿರುನಗೆಯಿಂದ) ದೇವಋಷಿಗೆ ಉಂಟಾದದ್ದು ಕೇವಲ ಸಂಶಯವೊ? ಸಮಸ್ಯೆಯೋ?

ನಾರದ : (ನಗುತ್ತ) ಮಹರ್ಷಿಗಳು ಅಂತರಾರ್ಥಗಳನ್ನೂ ಹುಡುಕಬಾರದು.

ನಿತ್ಯ ಸಂದೇಹ ಪ್ರಾಣಿಯಾದದ್ದರಿಂದ ನನಗೆ ಮಾತ್ರ ಸಂಶಯವಾಗಿಯೇ ಕಂಡು ಬಂದಿದೆ. ಇನ್ನು ನನ್ನ ಸಂಶಯವನ್ನು ಹೇಳುವೆ. ನಾನು ಇದುವರೆಗೆ ಕೇಳಿದ ಮಂತ್ರಗಳಲ್ಲಿ ತಾವು ಯಾವ ದೇವರನ್ನು ಆರಾಧಿಸಿದಿರೊ ತಿಳಿಯದಾಯಿತು ಯಾಗ ಪ್ರಯೋಜನ ನಿರ್ದಿಷ್ಟವಾಗಲಿಲ್ಲ.

ಅತ್ರಿ : ಇದು ದ್ವಾಪರಯುಗ ಕಲಿಯುಗಗಳ ಸಂಧಿಕಾಲ ಕಲಿ ಪ್ರಭಾವ ಈಗಲೇ ಪ್ರಬಲವಾ ಗುತ್ತ ಜನರ ಪ್ರವರ್ತನೆಗಳಲ್ಲಿ ಪರಿವರ್ತನೆಯನ್ನು ತರುತ್ತಿದೆ. ಕಲಿ ದೋಷಹಾರಿಯಾಗಿ ದೈವಸಹಾಯ ಬೇಡಿ ಈ ಯಜ್ಞವನ್ನು ಆರಂಭಿಸಿದ್ದೇನೆ. ಮೊದಲ ಋಷಿ : ಯಜ್ಞಾಚರಣೆಯೇ ಸರ್ವಫಲಪ್ರದವಾಗಿರಲು ಪ್ರತ್ಯೇಕವಾಗಿ ದೈವದ ಸಹಾಯ ಅಗತ್ಯವೇ ಮಹರ್ಷಿ.

ಎರಡನೇ ಋಷಿ : ಇದು ಮತ್ತೂ ಚೆನ್ನಾಗಿದೆ. ದೇಹಧಾರಿಗಳಾಗಿ ಇಹದಲ್ಲಿ ಮಾಡುವ ಕಾಮ್ಯ ಕರ್ಮಗಳು ದೇವತಾ ಸಂಕಲ್ಪ ಆವಾಹನೆಯಿಲ್ಲದೆ ಫಲಪ್ರದವಾಗುವುದೇ ?

ಜಮದಗ್ನಿ : (ನಾರದನನ್ನುದ್ದೇಶಿಸಿ) ಮಹರ್ಷಿ ಕೇಳಿದಿರಲ್ಲ! ಇದೇ ಕಲಿ ಮಾಯೆ. ಈ ಮಾಯೆಯನ್ನು ದಾಟುವ ಶಕ್ತಿಯನ್ನು ನೀಡಿ ಜನ ಸಮುದಾಯವನ್ನು ಋಜುಪ್ರವರ್ತನೆಗೊಳಗಾಗುವಂತೆ ಮಾಡಲು ದೈವದ ನೆರವು ಕೋರಿ ಈ ಪ್ರಯತ್ನದಲ್ಲಿ ತೊಡಗಿದ್ದೇವೆ.

ನಾರದ : ಚೆನ್ನಾಗಿದೆ. ಮತ್ತೆ ಯಜ್ಞಕ್ಕೆ ಒಬ್ಬ ಫಲಪ್ರದಾತ ಇರಬೇಕಲ್ಲವೇ? ಇಷ್ಟರವರೆಗೆ ತಾವು ಪಠಿಸಿದ ನಾಮ ವಿಶೇಷಣಗಳು ಯಾವ ದೈವಕ್ಕಾದರೂ ವರ್ತಿಸಬಹುದಲ್ಲ. ಮತ್ತೆ ತಾವು ಯಾವ ದೈವವನ್ನು ಆರಾಧಿಸಿದಂತೆ?

ಜಮದಗ್ನಿ : ಯಾರೆಂದು ಹೇಳಬೇಕೆ ? ಸರ್ವಭೂತ ಸ್ವರೂಪನೂ, ಭೂತನಾಥನೂ ಆದ ಮಹೇಶ್ವರನಿಗೇ ಈ ಗುಣಗಳೆಲ್ಲವೂ ಇವೆ. ಆತನ ತ್ರಿನೇತ್ರಗಳು ಸೃಷ್ಟಿ, ಸ್ಥಿತಿ, ಲಯಗಳ ನಿದರ್ಶನ. ಆದ್ದರಿಂದ ಫಲಭೋಕ್ತೃತ್ವ ಆತನದ್ದೇ.

ಮೊದಲ ಋಷಿ : ತಮ್ಮ ಆಲೋಚನೆ ಅಸಂಬದ್ಧವಾಗಿದೆ. ಶುದ್ಧ ಸತ್ವ ಮಯನೂ ನಿತ್ಯ ಪ್ರಣವನಾದಲೋಲನೂ ಸರ್ವ ಜಗತಿ ಪಿತಾಮಹನೂ ಆದ ಆ ಚತುರ್ಮುಖನಿಗಿಂತ ಬೇರೆಯಾದ ಫಲಭೋಕ್ತೃ ಇರಬಲ್ಲನೇ?

ಎರಡನೇ ಋಷಿ : (ವ್ಯಂಗ್ಯ ನಗೆಯಿಂದ) ಮೂರ್ಖ ಪ್ರಲಾಪ, ಸರ್ವಜಗದಾಧಾರನೂ ಸರ್ವಾಂತರ್ಯಾಮಿಯೂ ಬ್ರಹ್ಮರುದ್ರಾದಿಗಳಿಗೂ ಮೂಲ ಸ್ವರೂಪನಾದ ವಿಷ್ಣುವಿಗಿಂತ ಬೇರೆ ಫಲಭೋಕ್ತನಿರುವನೆ ?

ನಾರದ : ಆಹಾ! ನಿನ್ನ ಚಿಕ್ಕ ಸಂದೇಹ ನಿಮಗೆ ದೊಡ್ಡ ಸಮಸ್ಯೆಯಾಗಿ ಪರಿಣಮಿಸಿತಲ್ಲ! ಮ[illegible] ನನಗೆ ಹೋಗಿ ಬರಲು ಅಪ್ಪಣೆಯಾಗಲಿ.

ಅತ್ರಿ : (ಕಿರುನಗೆಯಿಂದ) ದೇವ ಋಷಿಯ ಕಲಹಭೋಕ್ತೃ ಎಂಬ ಹೆಸರು ಸಾರ್ಥಕವಾಯಿತು

(36 ನೇ ಪುಟ ನೋಡಿ)

# ವಾರ್ತಾಲಹರಿ

## ಸ್ವಾಮಿಯ ನವರಾತ್ರಿ ಬ್ರಹ್ಮೋತ್ಸವ

ತಿರುಮಲೆಯ ಶ್ರೀ ವೆಂಕಟೇಶ್ವರಸ್ವಾಮಿಯ ನವರಾತ್ರಿ ಬ್ರಹ್ಮೋತ್ಸವಗಳು ಇದೇ ಅಕ್ಟೋಬರ್ 13 ರಿಂದ 21 ರವರೆಗೆ ಅತ್ಯಂತ ಉತ್ಸಾಹ, ಸಡಗರ, ಸಂಭ್ರಮಗಳಿಂದ ನಡೆಸಲ್ಪಟ್ಟು ಸಪ್ತಗಿರಿಗಳೂ ಗೋವಿಂದನಾಮಗಾನ ಝುರಿಯಲ್ಲಿ ನೆನೆಯುವಂತಾಯಿತು. ಲಕ್ಷಾಂತರ ಮಂದಿ ಭಕ್ತರು ಸ್ವಾಮಿಯನ್ನು ತಮ್ಮ ಕಣ್ಣಿನಲ್ಲಿ, ಹೃದಯದಲ್ಲಿ ತುಂಬಿಕೊಂಡರು.

ಅಕ್ಟೋಬರ್ 12 ರಂದು ರಾತ್ರಿ ಸ್ವಾಮಿ ಆಲಯದಲ್ಲಿ ನವರಾತ್ರಿ ಬ್ರಹ್ಮೋತ್ಸವಗಳ ಅಂಕುರಾರ್ಪಣೆ ನಡೆಯಿತು. ಈ ಕಾರ್ಯಕ್ರಮದ ಭಾಗವಾಗಿ ಸ್ವಾಮಿಯ ಸರ್ವಸೇನಾಧಿಪತಿ ವಿಶ್ವಕ್ಸೇನರು ತಿರುಮಲೆಯ ನಾಲ್ಕು ಮಾಡವೀಧಿಗಳಲ್ಲಿ ಮೆರವಣಿಗೆಯಲ್ಲಿ ಹೊರಟು, ಬ್ರಹ್ಮೋತ್ಸವಗಳಲ್ಲಿ ಭಾಗವಹಿಸಬೇಕೆಂದು ಅಷ್ಟ ದಿಕ್ಪಾಲಕರನ್ನೂ, ಸಕಲ ದೇವತೆಗಳನ್ನೂ ಆಹ್ವಾನಿಸಿದರು. ಈ ಕಾರ್ಯಕ್ರಮದಲ್ಲಿ ತಿ.ತಿ.ದೇ. ಕಾರ್ಯನಿರ್ವಹಣಾಧಿಕಾರಿ ಶ್ರೀ ಎಂ.ಕೆ.ಆರ್. ವಿನಾಯಕ, ಜೆ.ಇ.ಓ. ಶ್ರೀ ಬಾಲಸುಬ್ರಹ್ಮಣ್ಯಂ, ಸಂರಕ್ಷಣಾಧಿಕಾರಿ ಶ್ರೀ ಈಶ್ವರರೆಡ್ಡಿ ಮತ್ತಿತರರು ಭಾಗವಹಿಸಿದ್ದರು.

ಮಾರನೆಯದಿನ ಎಂದರೆ ಅಕ್ಟೋಬರ್ 13 ರಂದು ಸಂಜೆ ಸ್ವಾಮಿಯ ಶ್ರೀದೇವಿ ಭೂದೇವಿಯರೊಡನೆ ದೊಡ್ಡ ಶೇಷವಾಹನದಲ್ಲಿ ಆಲಯದಿಂದ ಹೊರಬಂದು ರಥಬೀದಿಗಳಲ್ಲಿ ಮೆರವಣಿಗೆ ಹೊರಟರು. ಅಂದು ಮಳೆಯ ಆರ್ಭಟ ತಿರುಮಲೆಯಲ್ಲಿತ್ತು. ಆದರೆ ಮೆರವಣಿಗೆ ಆಲಯದ ಹೊರಗಡೆ ಬಂದಾಗ ನಿಂತ ಮಳೆ ಸ್ವಾಮಿಯು ಆಲಯಕ್ಕೆ ಹಿಂದಿರುಗಿದ ನಂತರ ಮತ್ತೆ ಆರಂಭವಾಯಿತು.

ತಿರುಮಲೆಯ ಶೇಷಾದ್ರಿನಗರ ಉದ್ಯಾನವನದಲ್ಲಿ ತಿ.ತಿ.ದೇ. ಉಪವನವಿಭಾಗವು ಏರ್ಪಡಿಸಿದ್ದ ಫಲಪುಷ್ಪ ಪ್ರದರ್ಶನವೂ ಅಂದೇ ಉದ್ಘಾಟನೆಯಾಯಿತು. ಈ ಫಲಪುಷ್ಪ ಪ್ರದರ್ಶನವನ್ನು ಸ್ಥಳೀಯ ಎಂ. ಎಲ್. ಎ. ಶ್ರೀ ಎ. ಮೋಹನ್ (ತಿ.ತಿ.ದೇ. ಧರ್ಮಕರ್ತರ ಮಂಡಳಿಯ ಸದಸ್ಯರೂ ಹೌದು) ಉದ್ಘಾಟಿಸಿದರು.

ಅಕ್ಟೋಬರ್ 14 ರಂದು ಸ್ವಾಮಿ ಬೆಳಗ್ಗೆ ಚಿಕ್ಕ ಶೇಷವಾಹನದಲ್ಲಿ ಹೊರಬಂದು ದರ್ಶನ ನೀಡಿದರೆ ಸಂಜೆ ಹಂಸವಾಹನನಾಗಿ ತಾನು ಪರಮಹಂಸನೆಂದು ಮನವರಿಕೆ ಮಾಡಿಕೊಟ್ಟರು. ಮೂರನೆಯದಿನ ಅಕ್ಟೋಬರ್ 15 ರಂದು ಬೆಳಗ್ಗೆ ಸಿಂಹವಾಹನವಾದರೆ ಸಂಜೆ ಮುತ್ತಿನ ಚಪ್ಪರ ವಾಹನ. 16 ರಂದು ಕಲ್ಪವೃಕ್ಷವಾಹನ ಹಾಗೂ ಸರ್ವಭೂಪಾಲ ವಾಹನ.



ಅಕ್ಟೋಬರ್ 17 ರಂದು ಬೆಳಗ್ಗೆ ಮೋಹಿನೀ ಅವತಾರವಾದರೆ ಅಂದು ಸಂಜೆ ಗರುಡೋತ್ಸವ. ಗರುಡೋತ್ಸವದ ಸಂದರ್ಭದಲ್ಲಿ ಗರುಡನನ್ನೇರಿದ ಸ್ವಾಮಿಗೆ ಮಕರಕಂಠಿಹಾರ, ಲಕ್ಷ್ಮೀಹಾರ, ಸಹಸ್ರನಾಮ ಹಾರವೇ ಮೊದಲಾದ ಹಲವಾರು ಅಮೂಲ್ಯ ಅಸರ್ಘ್ಯವಾದ ಆಭರಣಗಳಿಂದ ಅಲಂಕಾರ ಮಾಡಲಾಗಿದ್ದಿತು. ಗರುಡವಾಹನನಾದ ಗಜೇಂದ್ರವರದನನ್ನು ನೋಡಲು ಜನತಾಮುಂದು ನಾಮುಂದು ಎಂದು ಮುಗಿಬಿದ್ದರೂ ಭಗವಂತನ ಬಳಿಯ ಪಾರ್ಷದರಂತೆ ಭಕ್ತಿ ಗೌರವಗಳಿಂದ ಗೋವಿಂದ ನಾಮಘೋಷದಲ್ಲಿ ತಲ್ಲೀನರಾದರು. ತುಸು ಹನಿಮಳೆಯಾದರೂ ಯಾತ್ರಿಕರ ಸಂದಣಿ ಕಡಮೆಯಾಗಲಿಲ್ಲ. ಆಂಧ್ರಪ್ರದೇಶದ ಮುಜರಾಯಿ ಇಲಾಖಾಮಂತ್ರಿಗಳು ಶ್ರೀ ಸಿಂಹಾದ್ರಿ ಸತ್ಯನಾರಾಯಣ, ಶಾಸನಸಭಾಸದಸ್ಯ ಶ್ರೀ ಎ. ಮೋಹನ್, ಕಾರ್ಯನಿರ್ವಹಣಾಧಿಕಾರಿ ಶ್ರೀ ಎಂ. ಕೆ. ಆರ್. ವಿನಾಯಕ್. ಜೆ.ಇ.ಓ. ಶ್ರೀ ಬಾಲಸುಬ್ರಹ್ಮಣ್ಯಂ ಹಾಗೂ ತಿರುಪತಿ ಜೆ.ಇ.ಓ. ಶ್ರೀ ಸತ್ಯನಾರಾಯಣರಾವ್ ಅವರು ಮೊದಲಾದವರು ಭಾಗವಹಿಸಿದ್ದು ಈ ಕಾರ್ಯಕ್ರಮದಲ್ಲಿ ಹೆಚ್ಚಿದ ಯಾತ್ರಿಕ ಸಂದಣಿಗೆ ಗರುಡೋತ್ಸವ ದರ್ಶನ ಸುಸೂತ್ರವಾಗುವಂತೆ ಮಾಡಿದ್ದೇ ಅಲ್ಲದೆ ಎಲ್ಲರಿಗೂ ಸ್ವಾಮಿದರ್ಶನ ಸುವ್ಯವಸ್ಥಿತವಾಗಿ ಆಗುವಂತೆ ಮಾಡಲಾಗಿದ್ದಿತು. ಆ ದಿನ ಸ್ವಾಮಿಗೆ ಸರಿಸುಮಾರು 30 ಲಕ್ಷ ರೂಪಾಯಿಗಳ ಆದಾಯ.

ಅಕ್ಟೋಬರ್ 18 ರ ಶುಕ್ರವಾರದಂದು ಸ್ವಾಮಿ ಹನುಮದ್ವಾಹನದಲ್ಲಿಯೂ ಗಜವಾಹನದಲ್ಲಿಯೂ 19 ರಂದು ಶನಿವಾರ ಸೂರ್ಯಪ್ರಭವಾಹನ ಚಂದ್ರ



ಪ್ರಭ ವಾಹನದಲ್ಲಿಯೂ ಮೆರವಣಿಗೆಯಲ್ಲಿ ಬಂದು ಭಕ್ತರಿಗೆ ದರ್ಶನ ನೀಡಿದರು.

ಅಕ್ಟೋಬರ್ 20 ರಂದು ಭಾನುವಾರ - ಸ್ವಾಮಿಗೆ ಸ್ವರ್ಣರಥೋತ್ಸವ. ಸಾವಿರಾರು ಮಂದಿ ಭಕ್ತರೊಡನೆ ಆಲಯದ ಎಲ್ಲ ಅಧಿಕಾರಿಗಳೊಡನೆ, ಧರ್ಮಕರ್ತರ ಮಂಡಳಿಯ ಅಧ್ಯಕ್ಷರು ಶ್ರೀ ರಾಮ ಬಾಬು ಅವರೂ ಸೇರಿದಂತೆ ಸ್ವಾಮಿಯ ರಥೋತ್ಸವದಲ್ಲಿ ಎಲ್ಲರೂ ಉತ್ಸಾಹದಿಂದ ಭಾಗವಹಿಸಿದರು.

21 ರಂದು ಸೋಮವಾರ ಚಕ್ರಸ್ನಾನದೊಡನೆ ನವರಾತ್ರಿ ಬ್ರಹ್ಮೋತ್ಸವಗಳು ಮುಗಿದವು.

ನವರಾತ್ರಿ ಬ್ರಹ್ಮೋತ್ಸವಗಳ ಸಮಯದಲ್ಲಿ ಸ್ವಾಮಿಯ ಸೇವೆಯಲ್ಲಿ ಪ್ರತಿದಿನವೂ ಸಾವಿರ ಕಿಲೋ ಹೂವುಗಳನ್ನು ಬಳಸಲಾಯಿತು. ವಾಹನೋತ್ಸವಗಳ ಮೆರವಣಿಗೆಯಲ್ಲಿ ಮೊದಲಿಗೆ ವಿವಿಧ ಆಕೃತಿಗಳಲ್ಲಿ ತಯಾರಿಸಿದ ಹೂವಿನಲಂಕಾರದ ವಾಹನಗಳು, ಆಲಯದ ಮುಂದಿರಿಸಿದ ಪುಷ್ಪಾಲಂಕಾರಗಳೂ, ವಿವಿಧ ವರ್ಣಗಳ ವಿದ್ಯುದ್ದೀಪಗಳ ಅಲಂಕಾರದ ವಿವಿಧ ದೇವತೆಗಳ ಪ್ರತಿಮೆಗಳು ಭಕ್ತರ ಕರ್ಷಣ ಕೇಂದ್ರಗಳಾಗಿದ್ದವು.



ಬ್ರಹ್ಮೋತ್ಸವಗಳಲ್ಲಿ ಭಕ್ತರ ಅನುಕೂಲಕ್ಕಾಗಿ ಧಾರ್ಮಿಕ ಪುಸ್ತಕಗಳ ಮಾರಾಟವನ್ನೂ ಏರ್ಪಡಿಸಲಾಗಿದ್ದಿತು. ಪುಸ್ತಕ ಪ್ರದರ್ಶನ ಮಾರಾಟಶಾಲೆಗಳಲ್ಲಿ ಈ ಬಾರಿಯ ಗರುಡೋತ್ಸವದಂದು 1997 ರ ಕ್ಯಾಲೆಂಡರ್‌ಗಳನ್ನೂ ಮಾರಾಟ ಮಾಡಲಾಯಿತು. ಸ್ವಾಮಿಯ ಸ್ಟಿಕ್ಕರ್‌ಗಳನ್ನೂ ಮಾರಾಟ ಮಾಡಲಾಯಿತು.

ಬ್ರಹ್ಮೋತ್ಸವಗಳ ಸಮಯದಲ್ಲಿ ಧರ್ಮಪ್ರಚಾರ ಪರಿಷತ್‌ನ ನೇತೃತ್ವದಲ್ಲಿ ತಿರುಮಲೆಯ ನೂತನ ಆಸ್ಥಾನ ಮಂಟಪದಲ್ಲಿ ದಿನವೂ ಬೆಳಗ್ಗಿನಿಂದ ರಾತ್ರಿಯವರೆಗೆ ಹರಿಕಥೆ, ಸಂಗೀತ, ನೃತ್ಯ ಗಮಕ, ಉಪನ್ಯಾಸ ಮೊದಲಾದ ಕಾರ್ಯಕ್ರಮಗಳು ಏರ್ಪಾಡಾಗಿದ್ದು, ಶ್ರೀಮತಿ ವಾಣಿಜಯರಾಂ ಶ್ರೀಮತಿ ಲೀಲ, ಶ್ರೀ ಕನ್ನಕ್ಕುಡಿ ವೈದ್ಯನಾಥನ್, ಶ್ರೀ ಯಲ್ಲಾ ವೆಂಕಟೇಶ್ವರರಾವ್ ಮೊದಲಾದವರು ಭಾಗವಹಿಸಿದ್ದರು. ತಿ.ತಿ.ದೇ. ದಾಸಸಾಹಿತ್ಯಪ್ರಾಜೆಕ್ಟ್, ಆಳ್ವಾರ್ ದಿವ್ಯ ಪ್ರಬಂಧ ಪ್ರಾಜೆಕ್ಟ್, ಅನ್ನಮಾಚಾರ್ಯ ಪ್ರಾಜೆಕ್ಟ್, ಸಂಗೀತ ನೃತ್ಯ ಕಲಾಶಾಲೆಗಳು ಈ ಸಾಂಸ್ಕೃತಿಕ ಉತ್ಸವಗಳಲ್ಲಿ ಪಾಲುಗೊಂಡಿದ್ದವು. ತಿ.ತಿ.ದೇ. ಉದ್ಯೋಗಿಗಳ ನಾಟಕ ಸಂಘದ ನಾಯಕ ಶ್ರೀ ಸಿ. ರಮಣ ನೇತೃತ್ವದಲ್ಲಿ ತೆಲುಗಿನಲ್ಲಿ ಶ್ರೀನಿವಾಸಕಲ್ಯಾಣ ನಾಟಕವು ಜನರನ್ನು ಆಕರ್ಷಿಸಿತು.

## ಪಾರುವೇಟಿ ಉತ್ಸವ

ನವರಾತ್ರಿ ಬ್ರಹ್ಮೋತ್ಸವಗಳ ನಂತರ ಅಕ್ಟೋಬರ್ 22 ರಂದು ಮಂಗಳವಾರ ಸ್ವಾಮಿಯ ಪಾರ್ವೇಟಿ ಉತ್ಸವ ಯಶಸ್ವಿಯಾಗಿ ನಡೆಯಿತು ತಿರುಮಲೆಯ ಗೋಗರ್ಭಂ ಡ್ಯಾಂ ಬಳಿ ಇರು಼ ಪಾರ್ವೇಟಿ ಮಂಟಪಕ್ಕೆ ಮೆರವಣಿಗೆಯಲ್ಲಿ ಆಗವಿಸಿದ ಮಲೆಯಪ್ಪಸ್ವಾಮಿ ವಿವಿಧ ಜಂತುಗಳ ಬೇ಼ಯಾಡಿದರು.

ಕಾರ್ಯಕ್ರಮ ಸಂಪ್ರದಾಯ ಬದ್ಧವಾಗಿ ಅಂದ ಮಧ್ಯಾಹ್ನದಿಂದ ಸಾಯಂಕಾಲದವರೆಗೆ ನ಼ಯಿತು. ಭಕ್ತರು ಈ ಕಾರ್ಯಕ್ರಮವನ್ನು ನೋಡಲ ಅನುಕೂಲವಾಗುವಂತೆ ಉಚಿತ ಬಸ್ ಸೌಕಯ಼ ವನ್ನೂ ಏರ್ಪಡಿಸಲಾಗಿದ್ದಿತು.

## ಸ್ವಾಮಿ ಸೇವೆಯಲ್ಲಿ ರಾಷ್ಟ್ರಪತಿ

ಭಾರತದ ರಾಷ್ಟ್ರಪತಿ ಡಾ|| ಶಂಕರ ದಯಾ಼ ಶರ್ಮ ಅವರು ಅಕ್ಟೋಬರ್ 24 ರಂದು ಗುರು



(34 ನೇ ಪುಟದಿಂದ)

ಆದರೂ ಸ್ವಲ್ಪ ಹೊತ್ತು ಇದ್ದು ಸಮಸ್ಯೆಯನ್ನು ಪರಿಹರಿಸಿದರೆ ಚೆನ್ನ.

ನಾರದ : ಎಂಥ ಮಾತು! ಎಂಥ ಮಾತು! ತ್ರಿಕಾಲಜ್ಞಾನ ಸಂಪನ್ನರಾದ ತಮಗಿಂತ ನಾನು ಅಧಿಕನೇ ? ಆದರೂ ಇದು ಪರಿಹಾರವಾಗ ಬೇಕಾದರೆ ಸರ್ವ ಗುಣಾಧಿಕನಾದ ದೈವ ಯಾರೆಂಬುದು ತೀರ್ಮಾನವಾಗಬೇಕಲ್ಲವೇ? ಆ ತೀರ್ಮಾನಕ್ಕೆ ಬರಲು (ಭೃಗು ವಿನತ್ತ ನೋಡಿ) ಭೃಗುಗಳೇ ಸಮರ್ಥರು. (ಭೃಗುವಿನ ಬಳಿಬಂದು) ಮಹರ್ಷಿ ಇದು ಸೂಕ್ತವಾದ ಅವಕಾಶ. ತಮ್ಮ ಶಕ್ತಿಗೂ ಆ ಭಗವಂತನ ರಕ್ತಿಗೂ ಇದು ಪರೀಕ್ಷೆ. ಇನ್ನು ತಾವೇ ಭಕ್ತಾನುರಕ್ತ ನಿರ್ಣಯಕಾರರು (ಎಲ್ಲರಿಗೂ ಸೇರಿದಂತೆ) ಎಲ್ಲರಿಗೂ ಅಭಿವಂದನೆಗಳು. (ನಿಷ್ಕ್ರಮಿಸುವನು.)

ಜಮದಗ್ನಿ : ದೇವಋಷಿ ಹೇಳಿದುದನ್ನು ಕೇಳಿದಿರಲ್ಲ! ಅವರು ತಿಳಿಸಿದಂತೆ ಮಹರ್ಷಿಗಳು ಭೃಗುವೇ ಈ ಕೆಲಸಕ್ಕೆ ಸಮರ್ಥರೆಂದುಕೊಳ್ಳುತ್ತೇನೆ. ಏನಿದು? ಮೌನವೇ ಸಮ್ಮತಿಯಂತಿದೆಯಲ್ಲ.

ಭೃಗು : ಮಹರ್ಷಿಗಳೇ ಇದೇ ನಿಮ್ಮೆಲ್ಲರ ಅಭಿಮತವೇ? ಹಾಗೇ ಆಗಲಿ. ತಮ್ಮ ಆಜ್ಞೆಯನ್ನು ಶಿರಸಾವಹಿಸಿ ನನ್ನ ಕರ್ತವ್ಯವನ್ನು ನಿರ್ವಹಿಸುವೆನು ಕಳುಹಿಸಿಕೊಡಿ.

ಎಲ್ಲರು : ಶುಭಮಸ್ತು. ✤

ವಾರ ತಿರುಮಲೆಯಲ್ಲಿ ಸ್ವಾಮಿಯನ್ನು ಸಂದರ್ಶಿಸಿದರು. ಅಂದು ಮಧ್ಯಾಹ್ನ ಪದ್ಮಾವತೀ ಅತಿಥಿಗೃಹದ ಬಳಿ ರಾಷ್ಟ್ರಪತಿಗೆ ತಿ.ತಿ.ದೇ. ಕಾರ್ಯನಿರ್ವಹಣಾಧಿಕಾರಿ ಶ್ರೀ ಎಂ.ಕೆ. ಆರ್. ವಿನಾಯಕ್, ಜೆ.ಇ.ಓ. ಶ್ರೀ ಬಾಲಸುಬ್ರಹ್ಮಣ್ಯಂ, ಸಂರಕ್ಷಣಾಧಿಕಾರಿ ಶ್ರೀ ಈಶ್ವರರೆಡ್ಡಿ ಮೊದಲಾದವರು ಸ್ವಾಗತ ಬಯಸಿದರು. ರೇಣಿಗುಂಟ ವಿಮಾನಾಶ್ರಯದಿಂದ ರಾಷ್ಟ್ರಪತಿಗಳನ್ನು ಆಂಧ್ರಪ್ರದೇಶದ ಮುಜರಾಯಿ ಇಲಾಖಾಮಂತ್ರಿ ಶ್ರೀ ಸಿಂಹಾದ್ರಿ ಸತ್ಯನಾರಾಯಣ ಅವರು ಕರೆತಂದರು.



ರಾಷ್ಟ್ರಪತಿಗಳು ಶ್ರೀ ವೆಂಕಟೇಶ್ವರಸ್ವಾಮಿಗೆ ಮುಡಿನೀಡಿದ ಬಳಿಕ ಆಲಯಕ್ಕೆ ಆಗಮಿಸಿ ಸ್ವಾಮಿಯ ದರ್ಶನ ಪಡೆದರು. ರಂಗನಾಯಕ ಮಂಟಪದಲ್ಲಿ ಅವರಿಗೆ ವೇದಾಶೀರ್ವಾದ ನೀಡಲಾಯಿತು. ಶ್ರೀ ಸಿಂಹಾದ್ರಿ ಸತ್ಯನಾರಾಯಣ ಅವರು ರಾಷ್ಟ್ರಪತಿಗೆ ಸ್ವಾಮಿ ಪ್ರಸಾದವನ್ನು ನೀಡಿದರು. ಅಂದು ರಾತ್ರಿ ಪೂಲಂಗಿ ಸೇವೆಯಲ್ಲಿ ರಾಷ್ಟ್ರಪತಿಗಳು ಪಾಲುಗೊಂಡರು.

ಮಾರನೆಯದಿನ ಅಕ್ಟೋಬರ್ 25 ರಂದು ಶುಕ್ರವಾರ ಬೆಳಗ್ಗೆ ರಾಷ್ಟ್ರಪತಿಗಳು ಸ್ವಾಮಿಯ ಸುಪ್ರಭಾತ, ಅಭಿಷೇಕ, ಅರ್ಚನೆ, ತೋಮಾಲಸೇವೆಗಳಲ್ಲಿ ಭಾಗವಹಿಸಿದರು.

ಅಂದು ಮಧ್ಯಾಹ್ನ ರಾಷ್ಟ್ರಪತಿಗಳು ತಿರುಚಾನೂರಿಗೆ ಆಗಮಿಸಿ ಶ್ರೀ ಪದ್ಮಾವತೀ ಅಮ್ಮನವರ ಆಲಯವನ್ನು ಸೇರಿ ಅಮ್ಮನವರನ್ನು ಸಂದರ್ಶಿಸಿ ಆರಾಧಿಸಿದರು. ಆಂಧ್ರಪ್ರದೇಶದ ಮುಜರಾಯಿ ಇಲಾಖಾ ಮಂತ್ರಿ ಸಿಂಹಾದ್ರಿ ಸತ್ಯನಾರಾಯಣ ತಿ.ತಿ.ದೇ. ಅಧ್ಯಕ್ಷರು ಶ್ರೀ ರಾಮಬಾಬು, ಕಾರ್ಯನಿರ್ವಹಣಾಧಿಕಾರಿ ಶ್ರೀ ಎಂ. ಕೆ. ಆರ್. ವಿನಾಯಕ್ ಮೊದಲಾದವರು ರಾಷ್ಟ್ರಪತಿಗಳೊಂದಿಗಿದ್ದರು. ಅಮ್ಮನವರ ದರ್ಶನಾನಂತರ ತಿರುಮಲೆಗೆ ಹಿಂದಿರುಗಿದ ರಾಷ್ಟ್ರಪತಿಗಳು ಅಂದು ಸಂಜೆ ಸ್ವಾಮಿಯ ಸಹಸ್ರದೀಪಾಲಂಕಾರ ಸೇವೆಯಲ್ಲಿ ಭಾಗವಹಿಸಿ, ಅಕ್ಟೋಬರ್ 26 ರಂದು ಶನಿವಾರ ರೇಣಿಗುಂಟ ವಿಮಾನಾಶ್ರಮದ ಮೂಲಕ ಹಿಂದಿರುಗಿದರು.




## ವೇದನಾದಾಮೃತಂ 3 ಭಾಗದ ಬಿಡುಗಡೆ

ತಿರುಮಲೆಯಲ್ಲಿರುವಾಗ ರಾಷ್ಟ್ರಪತಿಗಳು ವೇದನಾದಾಮೃತದ ಮೂರನೇ ಭಾಗದ ಕ್ಯಾಸೆಟ್‌ಗಳನ್ನು ಬಿಡುಗಡೆ ಮಾಡಿದರು. ವೇದನಾದಾಮೃತದ ಒಂದು ಎರಡನೇ ಭಾಗಗಳನ್ನೂ ಅವರೇ ಈ ಹಿಂದೆ ಮೇ ತಿಂಗಳಿನಿಂದ ಆರಂಭಿಸಿ ಬಿಡುಗಡೆ ಮಾಡಿದ್ದರು ಎಂಬುದನ್ನು ಇಲ್ಲಿ ನೆನೆಯಬಹುದು. ಬ್ರಹ್ಮೋತ್ಸವದ ಮೊದಲು ಸರ್ವದೇವತೆಗಳನ್ನೂ ಆಹ್ವಾನಿಸುವ ಮಂತ್ರಗಳ ಗಾಯನ ಈ ಧ್ವನಿಸುರುಳಿಯಲ್ಲಿದೆ. ತಿ.ತಿ.ದೇ. ಆಸ್ಥಾನ ವಿದ್ವಾಂಸ ಶ್ರೀ ಮಾಡಬಾಕಂ ಶ್ರೀನಿವಾಸ ಭಟ್ಟಾಚಾರ್ಯರ ನೇತೃತ್ವದಲ್ಲಿ ವೈಖಾನಸಾಗಮ ರೀತ್ಯಾ ಗಾಯನವಾಗಿರುವ ಈ ಧ್ವನಿಸುರುಳಿಯನ್ನು ಶ್ರೀ ವೆಂಕಟೇಶ್ವರ ರಿಕಾರ್ಡಿಂಗ್ ಪ್ರಾಜೆಕ್ಟ್ ತಯಾರಿಸಿದೆ.

## ಸ್ವಾಮಿಸೇವೆಯಲ್ಲಿ ಪ್ರಧಾನಿ, ಮುಖ್ಯಮಂತ್ರಿ

ಭಾರತದ ಪ್ರಧಾನಮಂತ್ರಿ ಶ್ರೀ ಎಚ್. ಡಿ. ದೇವೇಗೌಡ, ಆಂಧ್ರಪ್ರದೇಶದ ಮುಖ್ಯಮಂತ್ರಿ ಶ್ರೀ ಎನ್. ಚಂದ್ರಬಾಬುನಾಯುಡು ಅವರುಗಳು





ಅಕ್ಟೋಬರ್ 20 ರಂದು ಭಾನುವಾರ ತಿರುಮಲೆಯ ಸ್ವಾಮಿಯನ್ನು ಸಂದರ್ಶಿಸಿ ಆರಾಧಿಸಿದರು.

ಆಲಯ ಮಹಾದ್ವಾರದ ಬಳಿ ಪ್ರಧಾನಮಂತ್ರಿ ಹಾಗೂ ಮುಖ್ಯಮಂತ್ರಿಗಳಿಗೆ ಘನವಾದ ಸ್ವಾಗತ ನೀಡಲಾಯಿತು. ತಿ.ತಿ.ದೇ. ಅಧ್ಯಕ್ಷರು ಶ್ರೀರಾಮ ಬಾಬು ಕಾರ್ಯನಿರ್ವಹಣಾಧಿಕಾರಿ ಶ್ರೀ ಎಂ. ಕೆ. ಆರ್. ವಿನಾಯಕ್, ಸಂರಕ್ಷಣಾಧಿಕಾರಿ ಶ್ರೀ ಈಶ್ವರ ರೆಡ್ಡಿ ಮೊದಲಾದವರು ಸಾಂಪ್ರದಾಯಿಕವಾಗಿ ಇಬ್ಬರನ್ನೂ ಸ್ವಾಗತಿಸಿದರು.

ಸ್ವಾಮಿಯ ದರ್ಶನದ ನಂತರ ರಂಗನಾಯಕ ಮಂಟಪದಲ್ಲಿ ವೇದಪಂಡಿತರು ಪ್ರಧಾನಮಂತ್ರಿಗಳನ್ನು ಮುಖ್ಯಮಂತ್ರಿಗಳನ್ನು ವೇದಸೂಕ್ತಗಳಿಂದ ಆಶೀರ್ವದಿಸಿದರು. ಅಧ್ಯಕ್ಷ ಶ್ರೀ ರಾಮಬಾಬು ಅವರು ಪ್ರಧಾನಮಂತ್ರಿಗಳಿಗೂ, ಕಾರ್ಯ ನಿರ್ವಹಣಾಧಿಕಾರಿ ಶ್ರೀ ವಿನಾಯಕರು ಮುಖ್ಯ ಮಂತ್ರಿಗ ಪ್ರಸಾದಗಳನ್ನು ನೀಡಿದರು.







## ತಿರುನಕ್ಷತ್ರ ಉತ್ಸವಗಳು

ತಿ.ತಿ.ದೇ. ಆಳ್ವಾರ್ ದಿವ್ಯಪ್ರಬಂಧ ಪ್ರಾಜೆಕ್ಟ್ ವತಿಯಿಂದ ಅಕ್ಟೋಬರ್ 21 ರಿಂದ 24 ರ ವರೆಗೆ ನಾಲ್ಕು ದಿನಗಳ ಕಾಲ ತಿರುಪತಿಯ ಅನ್ನಮಾಚಾರ್ಯ ಕಲಾಮಂದಿರದಲ್ಲಿ ಆಳ್ವಾರರ ತಿರುನಕ್ಷತ್ರ ಉತ್ಸವಗಳು ನಡೆದವು.

21 ರಂದು ಸೋಮವಾರ ವಿಜಯದಶಮಿಯಂದು ಪೊಯ್‌ಗೈ ಆಳ್ವಾರರ ತಿರುನಕ್ಷತ್ರವು ಡಾ. ಮೇಡಸಾನಿ ಮೋಹನ್ ಅವರ ಅಧ್ಯಕ್ಷತೆಯಲ್ಲಿ ನಡೆಯಿತು. ಶ್ರೀ ಸಿ. ಆರ್. ರಂಗರಾಜನ್ ಅವರು ಪೊಯ್‌ಗೈ ಆಳ್ವಾರರ ಜೀವನ ಹಾಗೂ ಪಾಶುರಗಳ ಹಿರಿಮೆಯನ್ನು ವಿವರಿಸಿದರು. ಕಾರ್ಯಕ್ರಮದ ಕೊನೆಯಲ್ಲಿ ಎಸ್. ವಿ. ಸಂಗೀತಕಲಾಶಾಲೆಯ ವಿದ್ಯಾರ್ಥಿಗಳಿಂದ ನೃತ್ಯಪ್ರದರ್ಶನ ನಡೆಯಿತು.

ದಿನಾಂಕ 22 ಮಂಗಳವಾರದಂದು ಆಚಾರ್ಯ ಕೆ. ಸರ್ವೋತ್ತಮರಾವ್ ಅವರ ಅಧ್ಯಕ್ಷತೆಯಲ್ಲಿ ಪೂದತ್ತಾಳ್ವಾರರ ತಿರುನಕ್ಷತ್ರ ಉತ್ಸವ ನಡೆಯಿತು. ಕವಿ ಶ್ರೀ ಮುದಿವರ್ತಿ ಕೊಂಡಮಾಚಾರ್ಯರು ಆಳ್ವಾರರ ಪಾಶುರಗಳಲ್ಲಿನ ಭಕ್ತಿಯ ಸೊಬಗನ್ನು ವಿವರಿಸಿದರು. ಎಸ್. ವಿ. ಸಂಗೀತ ಕಲಾಶಾಲೆಯ ವಿದ್ಯಾರ್ಥಿಗಳ ನೃತ್ಯಕಾರ್ಯಕ್ರಮ ನಡೆಯಿತು.

23 ರಂದು ಬುಧವಾರ ಸಪ್ತಗಿರಿ ಸಂಪಾದಕ ಶ್ರೀ ಎಸ್. ಎಸ್. ರಾಮಮೂರ್ತಿ ಅವರ ಅಧ್ಯಕ್ಷತೆಯಲ್ಲಿ ಪಿಳ್ಳೈಲೋಕಾಚಾರ್ಯರ ವರ್ಷ ತಿರುನಕ್ಷತ್ರ ಉತ್ಸವ ನಡೆಯಿತು. ತಿ.ತಿ.ದೇ. ಭಾಗವತ ಪ್ರಾಜೆಕ್ಟ್‌ನ ಶ್ರೀ ಎಸ್. ಬಿ. ಎಸ್. ಭಟ್ಟಾಚಾರ್ಯರು ಲೋಕಾಚಾರ್ಯರ ಬಗ್ಗೆ ಸೋದಾಹರಣವಾಗಿ ಉಪನ್ಯಾಸ ನೀಡಿದರು. ನಂತರ ಎಸ್. ವಿ. ಸಂಗೀತ ಕಲಾಶಾಲೆಯ ವಿದ್ಯಾರ್ಥಿಗಳಿಂದ ನೃತ್ಯಕಾರ್ಯಕ್ರಮ ಏರ್ಪಾಡಾಗಿದ್ದಿತು

24 ನೇ ತಾರೀಖು, ಗುರುವಾರ ಡಾ. ಎಸ್. ಸಿ. ವಿ. ನರಸಿಂಹಾಚಾರ್ಯ ಅವರ ಅಧ್ಯಕ್ಷತೆಯಲ್ಲಿ ಪೇಯಾಳ್ವಾರ್ ತಿರುನಕ್ಷತ್ರೋತ್ಸವ ನಡೆಯಿತು. ಡಾ. ಮುದಿವೇಡು ಪ್ರಭಾಕರರಾವ್ ಅವರು ಪೇಯಾಳ್ವಾರ್ ಪಾಶುರಗಳ ಬಗ್ಗೆ ಉಪನ್ಯಾಸ ನೀಡಿದರು. ಆಳ್ವಾರ್ ಪ್ರಾಜೆಕ್ಟ್ ನಿರ್ದೇಶಿಕ ಡಾ. ಮೇಡಸಾನಿ ಮೋಹನ್ ಅವರ ನೇತೃತ್ವದಲ್ಲಿ ಈ ತಿರುನಕ್ಷತ್ರೋತ್ಸವಗಳನ್ನು ಡಾ. ಬಿ. ಕುಸುಮಾಂಬ ಅವರು ನಿರ್ವಹಿಸಿದರು.

## ಬಿಜಾಪುರದಲ್ಲಿ "ಸಪ್ತಗಿರಿ" ಉತ್ಸವ

ಸಪ್ತಗಿರಿ ಮಾಸಪತ್ರಿಕೆ ಬಿಜಾಪೂರಕ್ಕೆ ಕಾಲಿರಿಸಿ 15 ವರ್ಷಗಳು ಸಂದವು. ಕಾರಣ ಪ್ರತಿ ವರ್ಷ ಕೋಜಾಗರೋತ್ಸವವನ್ನು ಮಾಡುವಂತೆ ಈ ವರ್ಷ ಎರಡು ದಿನಗಳ (ದಿ. 24 ಮತ್ತು 25-10-96) ಕಾರ್ಯಕ್ರಮ ಹಮ್ಮಿಕೊಳ್ಳಲಾಗಿತ್ತು.

ದಿ. 24-10-96 ರಂದು ಬಿಜಾಪೂರದಲ್ಲಿಯ 8 (ಎಂಟು) ಭಜನ ಮಂಡಳಿಗಳಲ್ಲಿ ಸ್ಪರ್ಧೆ ಏರ್ಪಡಿಸಿತ್ತು. ಶ್ರೀ ಶ್ರೀನಿವಾಸನ ಹಾಡುಗಳು, ಅಂತ್ಯಾಕ್ಷರಿ, ಒಂದು ಶಬ್ದಕೊಟ್ಟು ದಾಸರ ಪದ ಪ್ರಾರಂಭಿಸುವದು ಹೀಗೆ ವಿವಿಧ ರೀತಿಯಲ್ಲಿ ಪರೀಕ್ಷಿಸಲಾಯಿತು.

ಡಿ. 25-10-96 ರಂದು ಬೆಳಗ್ಗೆ ಇಲ್ಲಿನ ಇಬ್ರಾಹಿಂಪೂರ ಶ್ರೀ ವೆಂಕಟೇಶ್ವರ ದೇವಸ್ಥಾನಕ್ಕೆ ಎರಡು ಕಿ.ಮಿ. ದೂರದ ಶ್ರೀ ಆಂಜನೇಯ ಸ್ವಾಮಿ ದೇವಾಲಯದಿಂದ ಎಲ್ಲರೂ ಸಂಗೀತ ಸಾಹಿತ್ಯದೊಂದಿಗೆ ದಾಸರ ಪದ ನುಡಿಯುತ್ತ, ಕುಣಿಯುತ್ತ, ಭಜನೆ ಮಾಡುತ್ತ ಶ್ರೀನಿವಾಸನದರ್ಶನ ಪಡೆದುಕೊಂಡು ಪ್ರಸಾದ ಸ್ವೀಕರಿಸಲಾಯಿತು. ತಿರುಪತಿಯ ಮೆಟ್ಟಿಲೋತ್ಸವದ ನೆನಪನ್ನು ಈ ಕಾರ್ಯಕ್ರಮ ನೆನ

(ಮುಂದಿನ ಪುಟ ನೋಡಿ)



## ನೂತನ ಪೀಠಾಧಿಪತಿಗಳು

ಕೋಲಾರ ಮುಳಬಾಗಿಲುಗಳ ಮಧ್ಯದಲ್ಲಿನ ತಂಬಿಹಳ್ಳಿ ಅರ್ಥಾತ್ ಮಾಧವಪುರದಲ್ಲಿನ, ಶ್ರೀ ಮನ್ಮಧ್ವಾಚಾರ್ಯರ ಮೂಲಶಿಷ್ಯ ಶ್ರೀಮನ್ಮಾಧವ ತೀರ್ಥ ಸಂಸ್ಥಾನಾಧಿಪತಿಗಳಾದ ಶ್ರೀ ಶ್ರೀ ವಿಜಯಮಾಧವತೀರ್ಥಶ್ರೀಪಾದಂಗಳು ಇದೇ ಅಕ್ಟೋಬರ್ 13 ರಂದು ಭಾನುವಾರ ಹರಿಸನ್ನಿಧಿಗೈದ ಮೇಲೆ ಅವರ ಸ್ಥಾನಕ್ಕೆ ಶ್ರೀಮಠದ ಪ್ರತಿನಿಧಿಗಳೂ, ಶಿಷ್ಯರೂ ಆದ ಶ್ರೀ ಬಿ. ವಿ. ನರಸಿಂಹಮೂರ್ತಿ ಅವರು ತಂತ್ರಸಾರೋಕ್ತವಾಗಿ ಆಶ್ರಮಸ್ವೀಕರಿಸಿ ಪೀಠಾಧಿಪತಿಗಳಾಗಿದ್ದಾರೆ.

ಪ್ರಸನ್ನ ಶೂರ ಮಾಧವತೀರ್ಥ ಎಂಬ ಆಶ್ರಮನಾಮ ಸ್ವೀಕರಿಸಿದ ಶ್ರೀಪಾದಂಗಳು ಪೂರ್ವಾಶ್ರಮದಲ್ಲಿ ಕೋಲಾರವಾಣಿ ಪತ್ರಿಕೆಯ ಸಂಪಾದಕ ಪ್ರಕಾಶಕರಾಗಿದ್ದು, ಅರವಿಂದರು, ಸ್ವಾಮಿ ಚಿನ್ಮಯಾನಂದರನ್ನು ಆದರ್ಶವಾಗಿ ಹೊಂದಿದ್ದು, ಸನಾತನಧರ್ಮದ ಔನ್ನತ್ಯ ಪ್ರಾಮುಖ್ಯಗಳನ್ನು ಹರಡುವುದರಲ್ಲಿ ಹೆಚ್ಚಿನ ಆಸಕ್ತಿ ವಹಿಸಿದವರು.

ಪೀಠಾರೋಹಣ ಸಂದರ್ಭದಲ್ಲಿ ಮುಳಬಾಗಿಲು ಶ್ರೀಪಾದರಾಜ ಮಠದ ಶ್ರೀ ಶ್ರೀ ವಿಜ್ಞಾನನಿಧಿ ತೀರ್ಥ ಶ್ರೀ ಪಾದಂಗಳವರು ಹಾಜರಿದ್ದು ಸೂಕ್ತ ಮಾರ್ಗದರ್ಶನ ನೀಡಿ, ನೂತನ ಪೀಠಾಧಿಪತಿಗಳ ಪಟ್ಟಾಭಿಷೇಕ, ಶಾಂತಿಮಂತ್ರ, ಪ್ರಣವ ಮಂತ್ರೋಪದೇಶ - ಇತ್ಯಾದಿ ಕಾರ್ಯಕ್ರಮಗಳನ್ನು ಯಶಸ್ವಿಯಾಗಿ ನಡೆಸಿಕೊಟ್ಟರು.



## ಪ್ರಧಾನ ಇಂಜನೀಯರಾಗಿ ಶ್ರೀ ಮುನಿರೆಡ್ಡಿ

ತಿರುಮಲೆ - ತಿರುಪತಿ ದೇವಸ್ಥಾನಗಳ ಪ್ರಧಾನ (ಚೀಫ್) ಇಂಜನೀಯರ್ ಆಗಿ ಶ್ರೀ ಮುನಿರೆಡ್ಡಿ ಅವರು ಅಕ್ಟೋಬರ್ 26 ರಂದು ಜವಾಬ್ದಾರಿ ಸ್ವೀಕರಿಸಿದ್ದಾರೆ. ಈ ವರೆಗೆ ಶ್ರೀಯುತರು ಅದೇ ಪದವಿಯಲ್ಲಿ ಇನ್‌ಛಾರ್ಜ್ ಆಗಿ ಕೆಲಸ ನಿರ್ವಹಿಸುತ್ತಿದ್ದರು.





## ಶ್ರೀ ವೆಂಕಟೇಶ್ವರ ಕೇಂದ್ರ ಗ್ರಂಥಾಲಯ
## ಸಂಶೋಧನ ಕೇಂದ್ರ -- ತಿರುಪತಿ

# ಒಂದು ವಿನಂತಿ

1993 ರಲ್ಲಿ ತಿ.ತಿ.ದೇ. ಆಡಳಿತ ಮಂಡಳಿಯ ವಜ್ರಮಹೋತ್ಸವ ವರ್ಷದಲ್ಲಿ ಶ್ರೀ ವೆಂಕಟೇಶ್ವರ ಕೇಂದ್ರಗ್ರಂಥಾಲಯ, ಸಂಶೋಧನ ಕೇಂದ್ರ ವನ್ನು ನೆಲೆಗೊಳಿಸಿ ಅದನ್ನು ಸ್ವಾಮಿ ಭಕ್ತರ ಸೇವೆಯಲ್ಲಿ ಸಮರ್ಪಿಸಲಾಯಿತು. ನಮ್ಮ ಪರಂಪರೆಯ ವಾಸ್ತು ಶಿಲ್ಪದ ಹಾಗೂ, ಆಧುನಿಕ ವಾಸ್ತು ಶಾಸ್ತ್ರದ ಉತ್ತಮಾಂಶಗಳನ್ನು ಒಳಗೊಂಡು ನಿಂತಿರುವ ಶ್ರೀ ವೆಂಕಟೇಶ್ವರ ಕೇಂದ್ರಗ್ರಂಥಾಲಯ ಅಪೂರ್ವ ಪುಸ್ತಕಾಗಾರವಾಗಿ ವೇದೋಪನಿಷತ್ತುಗಳ, ಇತಿಹಾಸ ಪುರಾಣಗಳ, ಶಾಸ್ತ್ರ ಭಗವದ್ಗೀತೆಗಳ ಉಪಾದೇಯವೂ ಭವ್ಯವೂ ಆದ ಸಂದೇಶವನ್ನು ಪ್ರಸಾರಮಾಡುವ ಉದ್ದೇಶ ಹೊಂದಿದೆ.

ಸನಾತನ ಧರ್ಮದ ವೈವಿಧ್ಯಮಯ ಮುಖಗಳ, ಭಾರತೀಯ ಚಿಂತನ ಶೀಲತೆಯ, ತತ್ವ, ಧರ್ಮ, ಸಂಗೀತವೇ ಮೊದಲಾದ ಪರಂಪರಾಗತ ಸಂಪದ್ಭರಿತ ಸಂಸ್ಕೃತಿಯಲ್ಲಿ ಸಂಶೋಧನೆ ನಡೆಸಲು ಅವಕಾಶವನ್ನು ಶ್ರೀ ವೆಂಕಟೇಶ್ವರ ಕೇಂದ್ರಗ್ರಂಥಾಲಯ ಕಲ್ಪಿಸುವುದು. ಭಾರತೀಯ ಶಾಸ್ತ್ರದ ಬಗ್ಗೆ ಅಪರೂಪವೂ, ಅಮುದ್ರಿತವೂ ಆದ ಅಂಶಗಳನ್ನು ಪ್ರಕಟಿಸುವುದೂ, ಸಂಸ್ಕೃತ ಪಾಠಗಳ ಮೂಲ ಪ್ರತಿಗಳನ್ನೂ ಅವುಗಳ ಸರಳಾನುವಾದಗಳನ್ನೂ ಪ್ರಕಟಿಸುವುದೂ, ನಮ್ಮ ಉದ್ದೇಶವಾಗಿದೆ. ಈ ಪುಸ್ತಕ ಭಂಡಾರವು ಭಾರತೀಯ ಸಂಸ್ಕೃತಿಯ ದೇವಾಲಯವಾಗಿ, ಶಿಕ್ಷಣ, ಸಂಶೋಧನೆಯ ಮಹತ್ ಸಂಸ್ಥೆಯನ್ನಾಗಿ ಮಾಡುವುದೇ ನಮ್ಮ ಪವಿತ್ರತಮ ಕರ್ತವ್ಯವಾಗಿದೆ. ಇಡೀ ಯೋಜನೆ ಸಾಕಷ್ಟು ಸಂಪನ್ಮೂಲವನ್ನು ಅಪೇಕ್ಷಿಸುತ್ತದೆ.

ಹೀಗಾಗಿ, ಸಾರ್ವಜನಿಕರಲ್ಲಿ, ಸ್ವಯಂಸೇವಾ ಸಂಸ್ಥೆಗಳಲ್ಲಿ ಧನದ ರೂಪದಲ್ಲಿ ಆಗಲೀ, ಪುಸ್ತಕ ರೂಪದಲ್ಲಿಯಾಗಲೀ ಉದಾರವಾದ ದೇಣಿಗೆಗಳನ್ನು ನೀಡಬೇಕೆಂದು ಮನವಿ ಮಾಡುತ್ತೇವೆ.

ವ್ಯಕ್ತಿಗಳು ಹಾಗೂ ಸಸಂಸ್ಥೆಗಳು ತಮ್ಮಲ್ಲಿನ ಅಪರೂಪದ ಪುಸ್ತಕಗಳನ್ನೂ ಗ್ರಂಥಾಲಯಕ್ಕೆ ನೀಡಬಹುದು.

ತಮ್ಮ ಎಲ್ಲ ದೇಣಿಗೆಗಳನ್ನು ಪುಸ್ತಕವಾಗಲೀ, ಹಣವಾಗಲೀ ಕಳುಹಿಸಬೇಕಾದ ವಿಳಾಸ -- ವಿಶೇಷಾಧಿಕಾರಿ, ಶ್ರೀ ವೆಂಕಟೇಶ್ವರ ಕೇಂದ್ರಗ್ರಂಥಾಲಯ ಹಾಗೂ ಸಂಶೋಧನ ಕೇಂದ್ರ -- ತಿರುಪತಿ -- 517 502.

(ಹಿಂದಿನ ಪುಟದಿಂದ)

ಪಿಗೆ ತರುವಂತಿತ್ತು. ಭಕ್ತಿಯ ಪರಾಕಾಷ್ಠತೆಯ ಭಜನಮಂಡಳಿಗಳಲ್ಲಿ ಹೊರಹೊಮ್ಮುತ್ತಿದ್ದಂತೆ ಇರುವ ಜನ ಮಂತ್ರಮುಗ್ಧರಾಗಿ ನೋಡಿ ಸಂತೃಪ್ತಪಟ್ಟರು.

ಅಂದು ಸಾಯಂಕಾಲ ಪಂ. ಶ್ರೀ. ರಾಮಜೋ ಹಾಗೂ ರೇಡಿಯೋ ಆರ್ಟಿಸ್ಟ್ ಶ್ರೀಮತಿ ಜಹಾಗೀರದಾರ ಇವರೆ ದಾಸ ಸುಧೆಯೊಂ ಪ್ರಾರಂಭಗೊಂಡ ಕಾರ್ಯಕ್ರಮ ಎಲ್ಲ ಪ್ರೇಕ್ಷಕರ ಸಂತೋಷಗೊಳಿಸಿದ ನಂತರ ಎಲ್ಲ ಎಂಟು ಭಜ ಮಂಡಳಗಳಿಗೂ ಶ್ರೀನಿವಾಸಸ್ವಾಮಿಯ ಭಾವಚಿ ದಿಂದ ಕೂಡಿದ ಒಂದು ನೆನಪಿನ ಕಾಣಿಕೆ ಕೊ ಲಾಯಿತು. ಅದರಂತೆ ಐದು ಜನ ದಂಪತಿಗ ಸನ್ಮಾನಮಾಡಲಾಯಿತು. ನಂತರ ಕೋಜಾಗರಿ ತ್ಸವದ ಅಂಗವಾಗಿ ಶ್ರೀ ಲಕ್ಷ್ಮೀ ವೆಂಕಟೇಶ್ವರ ಮಿಯ ಪೂಜೆ ಪ್ರಸಾದ ವಿತರಣೆಯಾಯಿತು.

ಈ ಎಲ್ಲ ಕಾರ್ಯಕ್ರಮದಲ್ಲಿ ಸ್ಥಳೀಯ ಗಣ್ಯ ಕ್ತಿಗಳಾದ ಶ್ರೀ ಆರ್. ಬಿ. ನಾಯಕ, ಡಾ|| ಕೃಷ್ಣಕೊಲ್ಹಾರಕುಲಕರ್ಣಿ. ಹಾಗೂ ಸಂಗೀತಕಾರ ಭಾಗವಹಿಸಿ ಕಾರ್ಯಕ್ರಮ ಸಾಂಗವಾಗಿ ನಡೆಯ ಸಹಕರಿಸಿದರು.

ಶ್ರೀ ಹಣಮಂತಾಚಾರ್ಯ ನ. ಕಟ್ಟಿ ಸಪ್ತಗಿರಿ ಏಜೆಂಟರು ಈ ಎಲ್ಲ ಕಾರ್ಯಕ್ರಮದ ಸಂಚಾ ರಾಗಿ ಸೇವೆಸಲ್ಲಿಸಿದರು.





Published on behalf of T.T. Devasthanams by N.S. Rama Murthy, M.A., Editor and Printed at T.T.D. Press by M. Lakshmana Rao, Manager, T.T.D. Press, Tirupati - 517 507

